**ಕರ್ನಾಟಕ ಸರ್ಕಾರ**

ಸಂಖ್ಯೆ: ಸಿಒ 31 ಸಿಎಲ್‌ಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 03.02.2021

4/3 (4) 5/2/21

**ಇಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬೆಂಗಳೂರು-560001.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ** : ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಅಭಯ್ ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1109ಕ್ಕೆ ಉತ್ತರ ಒದಗಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಅಭಯ್ ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1109ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

Radha H.C

**(ಹೆಚ್. ಸಿ. ರಾಧ)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಸಹಕಾರ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಅಭಯ ಪಾಟೀಲ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1109**

ಉತ್ತರಿಸಬೇಕಾದ ದಿನಾಂಕ : **05.02.2021**

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ರೈತ ಬಾಂಧವರಿಗೆ ನೀಡಿರುವಂತೆ ನೇಕಾರ ಬಾಂಧವರಿಗೂ ಸಹಕಾರ ಸಂಘಗಳ ಮೂಲಕ ಸಾಲ ಮನ್ನಾ ಸೌಲಭ್ಯವನ್ನು ಕಲ್ಪಿಸುವ ಯೋಜನೆ ಸರ್ಕಾರದ ಮುಂದೆ ಇದೆಯೇ; ಇದ್ದಲ್ಲಿ, ಅದಕ್ಕಿರುವ ಮಾನದಂಡಗಳು ಹಾಗೂ ಅರ್ಹತೆಗಳನ್ನು ತಿಳಿಸುವುದು; | ರೈತ ಬಾಂಧವರಿಗೆ ನೀಡಿರುವಂತೆ ನೇಕಾರ ಬಾಂಧವರಿಗೂ ಸಹಕಾರ ಸಂಘಗಳ ಮೂಲಕ ಸಾಲ ಮನ್ನಾ ಸೌಲಭ್ಯವನ್ನು ಕಲ್ಪಿಸುವ ಯೋಜನೆ ಸರ್ಕಾರದ ಮುಂದಿದ್ದು, ಅದಕ್ಕಿರುವ ಮಾನದಂಡಗಳು ಹಾಗೂ ಅರ್ಹತೆಗಳು ಈ ಕೆಳಂಡಂತಿದೆ.<br><br>• ಸರ್ಕಾರದ ಆದೇಶ ಸಂಖ್ಯೆ: ವಾಕೈ 15 ಜಕೈಯೋ 2019, ದಿನಾಂಕ:02-08-2019ರನ್ವಯ ರಾಜ್ಯದ ನೇಕಾರರು ನೇಕಾರಿಕೆ ಉದ್ದೇಶಕ್ಕಾಗಿ ನೇಕಾರರ ಸಹಕಾರ ಸಂಘಗಳು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು, ಪಟ್ಟಣ ಸಹಕಾರಿ ಬ್ಯಾಂಕುಗಳು, ವಿವಿಧೋದ್ದೇಶ ಸಹಕಾರ ಸಂಘಗಳು, ಕೈಗಾರಿಕಾ ಸಹಕಾರ ಬ್ಯಾಂಕುಗಳು, ಕೃಷಿ ಪತ್ತಿನ ಸಹಕಾರ ಸಂಘಗಳು, ಸೌಹಾರ್ದ ಸಹಕಾರಿ ಸಂಘ, ಸೌಹಾರ್ದ ಸಹಕಾರಿ ಬ್ಯಾಂಕ್, ಕೃಷಿಯೇತರ ಪತ್ತಿನ ಸಹಕಾರ ಸಂಘ ಹಾಗೂ ಇತರೆ ಸಹಕಾರಿ ಬ್ಯಾಂಕುಗಳಿಂದ ದಿನಾಂಕ:26-07-2012 ರಿಂದ ಸಾಲ ಪಡೆದು ದಿನಾಂಕ:31-03-2019ಕ್ಕೆ ಹೊಂದಿದ ಹೊರಬಾಕಿಯಲ್ಲಿ ರೂ.1.00 ಲಕ್ಷಗಳವರೆಗಿನ (ಅಸಲು ಮತ್ತು ಬಡ್ಡಿ ಸೇರಿ) ಸಾಲ ಮನ್ನಾ ಮಾಡಲು ಕೆಲವು ಷರತ್ತುಗಳಿಗೊಳಪಟ್ಟು ಆದೇಶಿಸಲಾಗಿರುತ್ತದೆ. ಆದೇಶದ ಪ್ರತಿ **<u>ಅನುಬಂಧ-01</u>** ರಲ್ಲಿ ನೀಡಲಾಗಿದೆ.<br><br>• ಸರ್ಕಾರದ ಆದೇಶ ಸಂಖ್ಯೆ:ವಾಕೈ 46 ಜಕೈಯೋ 2020, ದಿನಾಂಕ:16-05-2020ರನ್ವಯ ರಾಜ್ಯದ ನೇಕಾರರು ನೇಕಾರಿಕೆ ಉದ್ದೇಶಕ್ಕಾಗಿ ನೇಕಾರರ ಸಹಕಾರ ಸಂಘಗಳು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು, ಪಟ್ಟಣ ಸಹಕಾರಿ ಬ್ಯಾಂಕುಗಳು, ವಿವಿಧೋದ್ದೇಶ ಸಹಕಾರ ಸಂಘ, ಸೌಹಾರ್ದ ಸಹಕಾರಿ ಬ್ಯಾಂಕ್, ಕೃಷಿಯೇತರ ಪತ್ತಿನ ಸಹಕಾರ ಸಂಘ ಹಾಗೂ ಇತರೆ ಸಹಕಾರಿ ಬ್ಯಾಂಕುಗಳಿಂದ ಸಾಲ ಪಡೆದು ದಿನಾಂಕ:01-01-2019 ರಿಂದ ದಿ:31-03-2019ರ ಅವಧಿಯೊಳಗೆ ಪಾವತಿಸಿದಂತಹ ನೇಕಾರರಿಗೂ ಸಹ ರೂ.1.00 ಲಕ್ಷಗಳವರೆಗಿನ (ಅಸಲು ಮತ್ತು ಬಡ್ಡಿ ಸೇರಿ) ಸಾಲ ಮನ್ನಾ ಯೋಜನೆಯನ್ನು ವಿಸ್ತರಿಸಿ ಅವರುಗಳು ಪಾವತಿ ಮಾಡಿದಂತಹ ಸಾಲದ ಮೊತ್ತವನ್ನು ಸರ್ಕಾರಕ್ಕೆ ಮರುಪಾವತಿಸಲು ಕೆಲವು ಷರತ್ತುಗಳಿಗೊಳಪಟ್ಟು ಆದೇಶಿಸಲಾಗಿರುತ್ತದೆ. ಆದೇಶದ ಪ್ರತಿ **<u>ಅನುಬಂಧ-02</u>** ರಲ್ಲಿ ನೀಡಲಾಗಿದೆ. |

| ಆ | ಯೋಜನೆಗಳ ಸೌಲಭ್ಯದಿಂದ ಬೆಳಗಾವಿ ದಕ್ಷಿಣ ಮತಕ್ಷೇತ್ರದ ನೇಕಾರರು ವಂಚಿತರಾಗಿದ್ದು, ಅದನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಸುಮಾರು 5 ವರ್ಷಗಳಿಂದ ನೇಕಾರರಿಗೆ ಬಡ್ಡಿ ಹಣ ಮನರ್ ಪಾವತಿಯಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ವಿವರ ನೀಡುವುದು | ಬೆಳಗಾವಿ ದಕ್ಷಿಣ ಮತಕ್ಷೇತ್ರದ ನೇಕಾರರಿಗೆ ಸಾಲ ಮನ್ನಾ ಯೋಜನೆಯಡಿ ಸೌಲಭ್ಯವನ್ನು ಒದಗಿಸಲಾಗಿದ್ದು, ಸಾಲ ಮನ್ನಾ ಸೌಲಭ್ಯದ ವಿವರ ಈ ಕೆಳಕಂಡಂತಿದೆ. (ರೂ.ಲಕ್ಷಗಳಲ್ಲಿ) (see table below) ಶೇ.1 ಮತ್ತು ಶೇ.3ರ ಬಡ್ಡಿ ಸಹಾಯಧನ ಯೋಜನೆಯಡಿ ಬಡ್ಡಿ ಸಹಾಯಧನವನ್ನು 2015-16 ಮತ್ತು 2016-17ನೇ ಸಾಲಿಗೆ ಬೆಳಗಾವಿ ದಕ್ಷಿಣ ಕ್ಷೇತ್ರದ 1517 ನೇಕಾರಿಗೆ ಒಟ್ಟು ರೂ.36.81 ಲಕ್ಷ ಬಡ್ಡಿ ಸಹಾಯಧನ ಒದಗಿಸಲಾಗಿರುತ್ತದೆ. |
|---|---|---|
| ಇ) | ಬೆಳಗಾವಿ ಜಿಲ್ಲೆಯ ಎಷ್ಟು ಜನ ರೈತರು ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಸಹಕಾರಿ ಸಂಸ್ಥೆಗಳಿಂದ ಬೆಳೆ ಸಾಲವನ್ನು ಪಡೆದಿದ್ದಾರೆ? (ಬ್ಯಾಂಕುವಾರು, ಸಹಕಾರಿ ಸಂಸ್ಥೆವಾರು, ಮತ ಕ್ಷೇತ್ರವಾರು ಮಾಹಿತಿ ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ** ಬೆಳಗಾವಿ ಜಿಲ್ಲೆಯಲ್ಲಿ ಬೆಳಗಾವಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಮೂಲಕ 2019-20ನೇ ಸಾಲಿನಲ್ಲಿ 3,80,223 ರೈತರು ರೂ. 1,89,369.69 ಲಕ್ಷ ಹಾಗೂ 2020-21 ನೇ ಸಾಲಿನಲ್ಲಿ ದಿ:31-01-2021 ರವರೆಗೆ 3,03,723 ರೈತರು ರೂ. 1,56,609.31 ಲಕ್ಷ ಬೆಳೆ ಸಾಲ ಪಡೆದಿರುತ್ತಾರೆ. ವಿವರ <u>ಅನುಬಂಧ-3</u>ರಲ್ಲಿ ನೀಡಲಾಗಿದೆ. **ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ** ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಸಹಕಾರಿ ಸಂಸ್ಥೆಗಳಿಂದ ದಿ:30.09.2020 ರ ಅಂತ್ಯಕ್ಕೆ ಬೆಳಗಾವಿ ಜಿಲ್ಲೆಯ 6,79,245 ರೈತರು ರೂ.6,24,018 ಲಕ್ಷಗಳ ಬೆಳೆ ಸಾಲವನ್ನು ಪಡೆದಿದ್ದಾರೆ. ಬ್ಯಾಂಕುವಾರು, ಸಹಕಾರಿ ಸಂಸ್ಥೆವಾರು ವಿವರಗಳನ್ನು <u>ಅನುಬಂಧ-4</u> ರಲ್ಲಿ ನೀಡಲಾಗಿದೆ. ಮತ್ತು ತಾಲ್ಲೂಕುವಾರು ವಿವರಗಳನ್ನು <u>ಅನುಬಂಧ-5</u> ರಲ್ಲಿ ನೀಡಲಾಗಿದೆ. |

| ವರ್ಷ | ನೇಕಾರರ ಸಂಖ್ಯೆ | ಸಾಲ ಮನ್ನಾ ಮೊತ್ತ |
|---|---|---|
| 2018-19 | 436 | 185.80 |
| 2019-20 | 1010 | 627.75 |
| 2020-21 (ದಿ:01.02.2021 ಕ್ಕೆ ಇದ್ದಂತೆ) | 289 | 116.35 (ರೂ.21.12 ಲಕ್ಷಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿರುತ್ತದೆ.) |

**ಸಂಖ್ಯೆ: ಸಿಒ 31 ಸಿಎಲ್ಎಸ್ 2021**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು – 560001.
ದೂ. 080–22034625 ಫ್ಯಾಕ್ಸ್: 080–22353932

ಸಂಖ್ಯೆ: ಸಿಐ 57 ಎಸ್‌ಪಿಐ 2021 ದಿನಾಂಕ 04.02.2021

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ,
ಬೆಂಗಳೂರು–01.

4/5 30 5/2/21

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ಅಂಚೆ ಪೆಟ್ಟಿಗೆ ಸಂಖ್ಯೆ: 5074,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1094ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.1094/2021, ದಿನಾಂಕ 27.01.2021.

*****

ದಿನಾಂಕ 05.02.2021 ರಂದು ಉತ್ತರಿಸಬೇಕಾದ ಮೇಲ್ಕಾಣಿಸಿದ ವಿಧಾನಸಭೆಯ ಪ್ರಶ್ನೆಗೆ ಉತ್ತರಗಳ 50 ಪ್ರತಿಗಳನ್ನು ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

G. Nagarathnamma 4/2/2021
(ನಾಗರತ್ನಮ್ಮ .ಜಿ)
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1094 |
| ವಿಧಾನ ಸಭೆಯ ಸದಸ್ಯರ ಹೆಸರು | : | ಶ್ರೀ ಬಂಡೆಪ್ಪ ಖಾಶೆಂಪೂರ್ (ಬೀದರ್ ದಕ್ಷಿಣ) |
| ಉತ್ತರಿಸುವವರು | : | ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು |
| ಉತ್ತರಿಸುವ ದಿನಾಂಕ | : | 05.02.2021 |
| ವಿಷಯ | : | ರಾಸಾಯನಿಕ ಘಟಕಗಳು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯ ಕೋಲ್ಹಾರ್ ಕೈಗಾರಿಕಾ ಪ್ರದೇಶದಲ್ಲಿ ಎಷ್ಟು ರಾಸಾಯನಿಕ ಘಟಕಗಳಿವೆ; (ಘಟಕಗಳ ಹೆಸರು ಮತ್ತು ಅವು ಪ್ರಾರಂಭವಾದ ವರ್ಷದ ವಿವರ ಒದಗಿಸುವುದು) | ಬೀದರ್ ಜಿಲ್ಲೆಯ ಕೋಲ್ಹಾರ್ ಕೈಗಾರಿಕಾ ಪ್ರದೇಶದಲ್ಲಿ 23 ರಾಸಾಯನಿಕ ಘಟಕಗಳಿವೆ (ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ). |
| ಆ | ಕೋಲ್ಹಾರ್ ಕೈಗಾರಿಕಾ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿರುವ ರಾಸಾಯನಿಕ ಘಟಕಗಳು ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿಯನ್ನು ಪಡೆದಿದೆಯೇ; | ಎಲ್ಲಾ ರಾಸಾಯನಿಕ ಘಟಕಗಳು ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿಯನ್ನು ಪಡೆದಿರುತ್ತದೆ. |
| ಇ | ಈ ರಾಸಾಯನಿಕ ಘಟಕಗಳಿಂದ ಸುತ್ತಮುತ್ತಲಿನ ಗ್ರಾಮಗಳ ಅಂತರ್ಜಲ ನೀರು ಕಲುಷಿತವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಈ | ಹಾಗಿದ್ದಲ್ಲಿ, ಅಂತರ್ಜಲ ನೀರು ಕಲುಷಿತ ಮಾಡುತಿರುವ ರಾಸಾಯನಿಕ ಘಟಕಗಳ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಅಂತರ್ಜಲ ನೀರು ಕಲುಷಿತವಾಗುತ್ತಿರುವುದನ್ನು ತಡೆಯಲು ಸರ್ಕಾರವು ಕೋಲ್ಹಾರ್ ಕೈಗಾರಿಕಾ ಪ್ರದೇಶದಲ್ಲಿ ಸಾಮಾನ್ಯ ತ್ಯಾಜ್ಯ ಸಂಸ್ಕರಣ ಘಟಕ (CETP) ಸ್ಥಾಪನೆ ಮಾಡಲಾಗುತ್ತಿದೆ. ಇದರ ಕಾಮಗಾರಿಗಳು ಮಾರ್ಚ್ 2021ರ ಅಂತ್ಯಕ್ಕೆ ಪೂರ್ಣಗೊಂಡು ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು. |

ಸಿಐ 57 ಎಸ್‌ಪಿಐ 2021

(ಜಗದೀಶ್ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ : ಸಿಒ 51 ಎಂಆರ್‌ಇ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:03.02.2021

ಇವರಿಂದ :

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬಹುಮಹಡಿಕಟ್ಟಡ,
ಬೆಂಗಳೂರು.

53

4/5

5/2/21

ಇವರಿಗೆ :

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ
ಬೆಂಗಳೂರು.

ಮಾನ್ಯರೇ,

ವಿಷಯ : ಕರ್ನಾಟಕ ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1118ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ : ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.1065/2021, ದಿನಾಂಕ:27.01.2021.

*****

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹೂಲಿಗೇರಿ ಡಿ.ಎಸ್. ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1118ಕ್ಕೆ ದಿನಾಂಕ:05.02.2021ರಂದು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಉತ್ತರವನ್ನು ಪಿ.ಡಿ.ಎಫ್ ಮಾದರಿಯಲ್ಲಿ ಇ-ಮೇಲ್ ಸಂಖ್ಯೆ: dsqb-kla-kar@nic.in ರ ಮೂಲಕ ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಬಿ.ಎಸ್. ಮಂಜುನಾಥ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಹಕಾರ ಇಲಾಖೆ.

## ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1118
2. ಸದಸ್ಯರ ಹೆಸರು : ಶ್ರೀ ಹೂಲಗೇರಿ ಡಿ.ಎಸ್.
3. ಉತ್ತರಿಸಬೇಕಾದ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | 2018-19, 2019-20 ಹಾಗೂ 2020-21ನೇ ಸಾಲಿನಲ್ಲಿ ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನಲ್ಲಿರುವ ಲಿಂಗಸಗೂರು ಕೃಷಿ ಉತ್ಪನ್ನ ಮಾರುಕಟ್ಟೆ ಹಾಗೂ ಮುದಗಲ್ ಉಪ ಮಾರುಕಟ್ಟೆಗಳಿಗೆ ಮಂಜೂರಾಗಿರುವ ಅನುದಾನ ಎಷ್ಟು; | 2018-19, 2019-20 ಹಾಗೂ 2020-21ನೇ ಸಾಲಿನಲ್ಲಿ ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನಲ್ಲಿರುವ ಲಿಂಗಸುಗೂರು ಕೃಷಿ ಉತ್ಪನ್ನ ಮಾರುಕಟ್ಟೆ ಹಾಗೂ ಮುದಗಲ್ ಉಪ ಮಾರುಕಟ್ಟೆಗಳಿಗೆ ಮಂಜೂರಾಗಿರುವ ಅನುದಾನದ ವಿವರ ಈ ಕೆಳಕಂಡಂತಿರುತ್ತವೆ :<br>**ಲಿಂಗಸುಗೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ**<br>1. 2018-19ನೇ ಸಾಲಿನ ಡಬ್ಲ್ಯೂ.ಐ.ಎಫ್ 2014-15 ಯೋಜನೆಯಡಿಯಲ್ಲಿ ಮಂಜೂರಾಗಿರುವ ಅನುದಾನ ರೂ.50.00 ಲಕ್ಷಗಳು.<br>2. 2019-20ನೇ ಸಾಲಿನ ಎಸ್.ಡಿ.ಪಿ ಯೋಜನೆಯಡಿ ಮಂಜೂರಾಗಿರುವ ಅನುದಾನ ರೂ.100.00 ಲಕ್ಷಗಳು.<br>3. 2020-21ನೇ ಸಾಲಿನಲ್ಲಿ ಯಾವುದೇ ಅನುದಾನ ಮಂಜೂರಾಗಿರುವುದಿಲ್ಲ.<br>**ಮುದಗಲ್ ಉಪ ಮಾರುಕಟ್ಟೆ** ಪ್ರಾಂಗಣಕ್ಕೆ 2018-19, 2019-20 ಹಾಗೂ 2020-21ನೇ ಸಾಲಿನಲ್ಲಿ ಯಾವುದೇ ಅನುದಾನ ಮಂಜೂರಾಗಿರುವುದಿಲ್ಲ. |
| ಆ | ಬಿಡುಗಡೆಯಾಗಿರುವ ಅನುದಾನ ಎಷ್ಟು; ಎಷ್ಟು ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ; | 2019-20ನೇ ಸಾಲಿನ ಎಸ್.ಡಿ.ಪಿ ಯೋಜನೆಯಡಿ ರೂ.87.11 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.<br>ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣದ 2 ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. |
| ಇ | ಈ ತಾಲ್ಲೂಕಿನಲ್ಲಿರುವ ಒಟ್ಟು ವಿಎಸ್‌ಎಸ್‌ಎನ್ ಸಹಕಾರ ಸಂಘಗಳು ಎಷ್ಟು; | ಲಿಂಗಸುಗೂರು ತಾಲ್ಲೂಕಿನಲ್ಲಿರುವ ವ್ಯವಸಾಯ ಸೇವಾ ಸಹಕಾರ ಸಂಘಗಳು ಒಟ್ಟು 24. |
| ಈ | ಸದರಿ ವಿಎಸ್‌ಎಸ್‌ಎನ್ ಸಹಕಾರ ಸಂಘಗಳ ಮುಖಾಂತರ ಎಷ್ಟು ರೈತರುಗಳಿಗೆ ಸಾಲ ಮಂಜೂರಾತಿ ನೀಡಲಾಗಿದೆ; ಇದರ ಅಂದಾಜು ಮೊತ್ತ ಎಷ್ಟು? | ಲಿಂಗಸುಗೂರು ತಾಲ್ಲೂಕಿನಲ್ಲಿರುವ ವ್ಯವಸಾಯ ಸೇವಾ ಸಹಕಾರ ಸಂಘಗಳ ಮುಖಾಂತರ ಒಟ್ಟು 15085 ರೈತರಿಗೆ ರೂ. 6221.19 ಲಕ್ಷಗಳ ಸಾಲ ಮಂಜೂರಾತಿ ಮಾಡಲಾಗಿದೆ. |

**ಸಂಖ್ಯೆ:ಸಿಒ 52 ಎಂಆರ್‌ಇ 2021**

(signature)
**(ಎಸ್.ಟಿ.ಸೋಮಶೇಖರ್)**
**ಸಹಕಾರ ಸಚಿವರು**

ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 29 ಎಲ್.ಎ.ಕ್ಯೂ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, 4ನೇ ಮಹಡಿ,
ಬೆಂಗಳೂರು, ದಿನಾಂಕ 04-02-2021

**ಇವರಿಂದ:**
**ಸರ್ಕಾರದ ಕಾರ್ಯದರ್ಶಿ,**
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
**ಕಾರ್ಯದರ್ಶಿ,**
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ಶ್ರೀ. ಲಾಲಾಜಿ ಆರ್. ಮೆಂಡನ್ (ಕಾಪು) ಮಾನ್ಯ ವಿಧಾನಸಭಾ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1147ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

~*~*~*~*~

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ಕೋರಿರುವಂತೆ ಶ್ರೀ. ಲಾಲಾಜಿ ಆರ್. ಮೆಂಡನ್ (ಕಾಪು) ಮಾನ್ಯ ವಿಧಾನಸಭಾ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1147ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ನಿಮ್ಮ ನಂಬುಗೆಯ,

(ಲತಾ. ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
(ಪೌರಾಡಳಿತ-2 & ಮಂಡಳಿ)
ನಗರಾಭಿವೃದ್ಧಿ ಇಲಾಖೆ.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1147 |
| ವಿಧಾನ ಸಭೆ ಸದಸ್ಯರ ಹೆಸರು | ಶ್ರೀ. ಲಾಲಾಜಿ ಆರ್. ಮೆಂಡನ್(ಕಾಪು) |
| ಉತ್ತರಿಸಬೇಕಾದ ದಿನಾಂಕ | 05-02-2021 |
| ಉತ್ತರಿಸಬೇಕಾದವರು | ಮಾನ್ಯ ನಗರಾಭಿವೃದ್ಧಿ ಸಚಿವರು. |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಕಾಪು ಯೋಜನಾ ಪ್ರಾಧಿಕಾರ ಅಸ್ತಿತ್ವಕ್ಕೆ ಬರುವ ಮೊದಲು ಗ್ರಾಮ ಪಂಚಾಯತ್ ಹಂತದಲ್ಲಿ ವಿಂಗಡಿಸಿ, ವಿನ್ಯಾಸ ಅನುಮೋದನೆ ಪಡೆದ ವಸತಿ ನಿವೇಶನಗಳಿಗೆ ಪ್ರಸ್ತುತ ಏಕ ವಿನ್ಯಾಸಕ್ಕೆ ಅನುಮೋದನ ನೀಡಲು ಸಾಧ್ಯವಾಗದೇ ಸಾರ್ವಜನಿಕರು ಸಂಕಷ್ಟಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಸರ್ಕಾರದ ಗಮನಕ್ಕೆ ಬಂದಿದೆ. |
| ಆ | ಬಂದಿದ್ದಲ್ಲಿ, ಏಕ ವಿನ್ಯಾಸ ಅನುಮೋದನೆಗೆ ಬಾಕಿ ಇರುವ ಎಲ್ಲಾ ಪ್ರಕರಣಗಳಿಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ಕ್ರಮವೇನು? (ವಿವರ ನೀಡುವುದು) | ಸ್ಥಳೀಯ ಯೋಜನಾ ಪ್ರದೇಶ ಘೋಷಣೆಯಾಗಿ ಮಹಾಯೋಜನೆ ಅನುಮೋದನೆಯಾಗಿರುವ ಪ್ರದೇಶಗಳಲ್ಲಿ ಬಂದಿರುವ ಎಲ್ಲಾ ತರಹದ ಅನಧಿಕೃತ ಅಭಿವೃದ್ಧಿಗಳನ್ನು ಸಕ್ರಮಗೊಳಿಸಲು ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 556 ಮೈಅಪ್ರಾ 2013(1) ದಿನಾಂಕ 28.05.2014 ರಲ್ಲಿ Karnataka Town and Country Planning (Regularisation of unauthorised Development or Constructions) Rules, 2014ನ್ನು ಜಾರಿಗೆ ತಂದಿದ್ದು, ಸದರಿ ನಿಯಮಕ್ಕೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು SLA(C) No(s).956-957/2017 ರಲ್ಲಿ ದಿನಾಂಕ 13.01.2017 ರಂದು ಮಧ್ಯಂತರ ತಡೆಯಾಜ್ಞೆಯನ್ನು ಮುಂದಿನ ತೀರ್ಪಿನವರೆಗೂ ಮುಂದುವರೆಸುವಂತೆ ಆದೇಶ ನೀಡಿರುತ್ತದೆ. ಸದರಿ ಪ್ರಕರಣವು ಇತ್ಯರ್ಥವಾದ ನಂತರ ನಿಯಮಾನುಸಾರ ಪರಿಶೀಲಿಸಿ ಮುಂದಿನ ಕ್ರಮವಹಿಸಲಾಗುವುದು. |

**ಸಂಖ್ಯೆ: ನಅಇ 29 ಎಲ್.ಎ.ಕ್ಯೂ. 2021**

(ಬಿ.ಎ.ಬಸವರಾಜ)
ನಗರಾಭಿವೃಧ್ಧಿ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: HORTI 50 HGM 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 04-02-2021

80
4/5
05/2/21

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಇವರಿಗೆ:
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ : ಶ್ರೀ ಲಿಂಗೇಶ ಕೆ.ಎಸ್, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1106ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಲಿಂಗೇಶ ಕೆ.ಎಸ್, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1106ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

T.V. Sunandamma 04/02/2021
(ಟಿ.ವಿ.ಸುನಂದಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

4/2

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆಸಂಖ್ಯೆ : 1106
ಸದಸ್ಯರ ಹೆಸರು : ಶ್ರೀ.ಲಿಂಗೇಶ ಕೆ.ಎಸ್.(ಬೇಲೂರು)
ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು
ಉತ್ತರಿಸಬೇಕಾದ ದಿನಾಂಕ : 05/02/2021.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆಯ ವಿವಿಧ ವಿಧಾನಸಭಾ ಕ್ಷೇತ್ರದಲ್ಲಿನ ಹಲವು ಪ್ರದೇಶದ ತೆಂಗಿನ ತೋಟಗಳು ಸಂಪೂರ್ಣವಾಗಿ ಒಣಗಿ ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು). | ಹಾಸನ ಜಿಲ್ಲೆಯ ವಿವಿಧ ವಿಧಾನಸಭಾ ಕ್ಷೇತ್ರದಲ್ಲಿನ ಹಲವು ಪ್ರದೇಶದ ತೆಂಗಿನ ತೋಟಗಳು ಸಂಪೂರ್ಣವಾಗಿ ಒಣಗಿ ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿಯನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ). |
| ಆ) | ಒಣಗಿ ಹೋಗಿರುವ ತೆಂಗಿನ ತೋಟಗಳ ವಿಸ್ತೀರ್ಣ ಎಷ್ಟು; ತೆಂಗಿನ ತೋಟಗಳು ಸಂಪೂರ್ಣವಾಗಿ ಒಣಗಿ ಹೋಗಿರುವುದಕ್ಕೆ ತೋಟಗಾರಿಕೆ ಇಲಾಖಾವತಿಯಿಂದ ತೆಗೆದು ಕೊಂಡಿರುವ ಕ್ರಮಗಳೇನು (ವಿಧಾನ ಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಹಾಸನ ಜಿಲ್ಲೆಯ ವಿವಿಧ ವಿಧಾನಸಭಾ ಕ್ಷೇತ್ರದಲ್ಲಿನ ಒಣಗಿ ಹೋಗಿರುವ ತೆಂಗಿನ ತೋಟಗಳ ವಿಸ್ತೀರ್ಣ 11488.4878 ಹೆಕ್ಟೇರ್ ಗಳಾಗಿರುತ್ತದೆ. ತೋಟಗಾರಿಕೆ ಇಲಾಖಾವತಿ ಯಿಂದ ಸಂಪೂರ್ಣವಾಗಿ ಒಣಗಿ ಹೋಗಿರುವ ಪ್ರತಿ ತೆಂಗಿನ ಮರಕ್ಕೆ ರೂ.400/- ರಂತೆ ರೈತರಿಗೆ ಪರಿಹಾರ ಧನ ನೀಡಲಾ ಗಿರುತ್ತದೆ. (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿಯನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ). |
| ಇ) | ಒಣಗಿ ಹೋಗಿರುವ ತೆಂಗಿನ ತೋಟದ ರೈತರಿಗೆ ತೋಟಗಾರಿಕೆ ಇಲಾಖೆ ಯಿಂದ ಪರಿಹಾರ ನೀಡಲಾಗಿದೆಯೇ ಹಾಗೂ ನಿಗದಿಪಡಿಸಿರುವ ಪರಿಹಾರ ವೆಷ್ಟು (ವಿಧಾನ ಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು)? | |

Horti 50 HGM 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ
ಸಚಿವರು

## ಅನುಬಂಧ-1

### ವಿಧಾನ ಸಭಾ ಕೇತ್ರವಾರು ಹಾಸನ ಜಿಲ್ಲೆಯ ಒಣಗಿ ಹೋಗಿರುವ ತೆಂಗಿನ ತೋಟಗಳ ವಿವರ

| ಕ್ರ.ಸಂ | ಜಿಲ್ಲೆ | ವಿಧಾನಸಭಾ ಕ್ಷೇತ್ರ | ಹಾಸನ ಜಿಲ್ಲೆಯಲ್ಲಿ ಒಣಗಿ ಹೋಗಿರುವ ತೆಂಗಿನ ತೋಟಗಳ ವಿಸ್ತೀರ್ಣ (ಹೆಕ್ಟೇರ್ ಗಳಲ್ಲಿ) |
|---|---|---|---|
| 1 | ಹಾಸನ | ಅರಕಲಗೂಡು | 105.0162602 |
| 2 | | ಅರಸಿಕೆರೆ | 4954.764228 |
| 3 | | ಬೇಲೂರು | 1768.536585 |
| 4 | | ಶ್ರವಣಬೆಳಗೊಳ | 3625.95122 |
| 5 | | ಹಾಸನ | 23.80487805 |
| 6 | | ಹೊಳೆನರಸಿಪುರ | 977.0813008 |
| 7 | | ಸಕಲೇಶಪುರ | 33.33333333 |
| ಒಟ್ಟು | | | **11488.4878** |

## ಅನುಬಂಧ-2

### ವಿಧಾನ ಸಭಾ ಕೇತ್ರವಾರು ಹಾಸನ ಜಿಲ್ಲೆಯ ಒಣಗಿ ಹೋಗಿರುವ ತೆಂಗಿನ ತೋಟಗಳಿಗೆ ಪರಿಹಾರ ನೀಡಿರುವ ವಿವರ

| ಕ್ರ.ಸಂ | ಜಿಲ್ಲೆ | ವಿಧಾನಸಭಾ ಕ್ಷೇತ್ರ | ಒಣಗಿ ಹೋಗಿರುವ ತೆಂಗಿನ ತೋಟದ ರೈತರಿಗೆ ಇಲಾಖೆವತಿಯಿಂದ ನೀಡಿರುವ ಪರಿಹಾರ ಧನ (ರೂ.ಲಕ್ಷಗಳಲ್ಲಿ) |
|---|---|---|---|
| 1 | ಹಾಸನ | ಅರಕಲಗೂಡು | 49.45 |
| 2 | | ಅರಸಿಕೆರೆ | 2316.2 |
| 3 | | ಬೇಲೂರು | 861.816 |
| 4 | | ಶ್ರವಣಬೆಳಗೊಳ | 1770.47 |
| 5 | | ಹಾಸನ | 11.7722 |
| 6 | | ಹೊಳೆನರಸಿಪುರ | 480.4058 |
| 7 | | ಸಕಲೇಶಪುರ | 16.152 |
| ಒಟ್ಟು | | | **5506.266** |

ಕರ್ನಾಟಕ ಸರ್ಕಾರ

ಸಂಖ್ಯೆ: HORTI 64 HGM 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 04-02-2021

148
4/5
05/2/21

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಇವರಿಗೆ:
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ :ಶ್ರೀ ಶ್ರೀನಿವಾಸ್ ಎಸ್.ಆರ್, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:605ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಶ್ರೀನಿವಾಸ್ ಎಸ್.ಆರ್, ವಿಸಸ, ಇವರ ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ:605ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

T.V. Sunandamma 04/02/2021
(ಟಿ.ವಿ.ಸುನಂದಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

4/2

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 605
ವಿಧಾನ ಸಭೆ ಸದಸ್ಯರ ಹೆಸರು : ಶ್ರೀ. ಶ್ರೀನಿವಾಸ್ (ವಾಸು) ಎಸ್. ಆರ್ (ಗುಬ್ಬಿ)
ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು
ಉತ್ತರಿಸಬೇಕಾದ ದಿನಾಂಕ : 05.02.2021

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಕೊರೋನಾ ಸಮಯದಲ್ಲಿ ತರಕಾರಿ ಬೆಳೆಗಾರರಿಗೆ ಸರ್ಕಾರದಿಂದ ಘೋಷಿಸಲಾಗಿರುವ ಸಹಾಯಧನವೆಷ್ಟು; | ರಾಜ್ಯದಲ್ಲಿ ಕೊರೋನಾ ಸಮಯದಲ್ಲಿ ತರಕಾರಿ ಬೆಳೆಗಾರರಿಗೆ ಸರ್ಕಾರದಿಂದ ಪ್ರತಿ ಹೆಕ್ಟೇರ್ ಗೆ ರೂ.15,000/- ಸಹಾಯಧನವನ್ನು ಘೋಷಿಸಲಾಗಿದೆ. |
| ಆ. | ಸದರಿ ರೈತರುಗಳಿಗೆ ಸಹಾಯಧನ ತಲುಪಿರುವುದೆ? (ವಿವರ ನೀಡುವುದು) | ಇಲ್ಲಿಯವರೆಗೆ ಒಟ್ಟು 66409 ತರಕಾರಿ ಬೆಳೆಗಾರರಿಗೆ ರೂ. 5648.01 ಲಕ್ಷಗಳ ಪರಿಹಾರಧನ ವಿತರಿಸಲಾಗಿರುತ್ತದೆ. (ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ) |

**Horti 64 HGM 2021**

**(ಆರ್.ಶಂಕರ್)**

**ತೋಟಗಾರಿಕೆ ಮತ್ತು ರೇಷ್ಮೆ**

**ಸಚಿವರು**

## ಅನುಬಂಧ

### ತರಕಾರಿ ಬೆಳೆಗಾರರಿಗೆ ಪರಿಹಾರಧನ ಕಾರ್ಯಕ್ರಮ

| ಕ್ರ.ಸಂ | ಜಿಲ್ಲೆ | ಭೌತಿಕ (ಸಂ) | ಆರ್ಥಿಕ (ರೂ. ಲಕ್ಷಗಳಲ್ಲಿ) |
|---|---|---|---|
| 1 | ಬಾಗಲಕೋಟೆ | 3465 | 282.45 |
| 2 | ಬೆಂಗಳೂರು ಗ್ರಾಮಾಂತರ | 441 | 26.03 |
| 3 | ಬೆಂಗಳೂರು ನಗರ | 22 | 1.59 |
| 4 | ಬೆಳಗಾವಿ | 5448 | 284.39 |
| 5 | ಬಳ್ಳಾರಿ | 2875 | 290.85 |
| 6 | ಬೀದರ್ | 1837 | 146.55 |
| 7 | ವಿಜಯಪುರ | 8095 | 888.15 |
| 8 | ಚಾಮರಾಜನಗರ | 2289 | 196.09 |
| 9 | ಚಿಕ್ಕಬಳ್ಳಾಪುರ | 3653 | 280.88 |
| 10 | ಚಿಕ್ಕಮಗಳೂರು | 527 | 35.93 |
| 11 | ಚಿತ್ರದುರ್ಗ | 12475 | 1251.53 |
| 13 | ದಾವಣಗೆರೆ | 2615 | 256.13 |
| 14 | ಧಾರವಾಡ | 1218 | 94.09 |
| 15 | ಗದಗ | 3278 | 316.41 |
| 16 | ಕಲಬುರ್ಗಿ | 1015 | 88.49 |
| 17 | ಹಾಸನ | 1248 | 70.98 |
| 18 | ಹಾವೇರಿ | 3663 | 274.22 |
| 20 | ಕೋಲಾರ | 3460 | 253.95 |
| 21 | ಕೊಪ್ಪಳ | 1337 | 105.55 |
| 22 | ಮಂಡ್ಯ | 2041 | 118.27 |
| 23 | ಮೈಸೂರು | 2239 | 143.37 |
| 24 | ರಾಯಚೂರು | 604 | 66.19 |
| 25 | ರಾಮನಗರ | 308 | 17.02 |
| 26 | ಶಿವಮೊಗ್ಗ | 99 | 5.81 |
| 27 | ತುಮಕೂರು | 1390 | 113.78 |
| 28 | ಉಡುಪಿ | 36 | 0.76 |
| 29 | ಉತ್ತರ ಕನ್ನಡ | 413 | 11.34 |
| 30 | ಯಾದಗಿರಿ | 318 | 27.23 |
| ಒಟ್ಟು | | **66409** | **5648.01** |

## ಕರ್ನಾಟಕ ಸರ್ಕಾರ

ಸಂಖ್ಯೆ:ನಅಇ 50 ಎಸ್ಎಫ್ ಸಿ 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 04-02-2021.
04-02-2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ಬೆಂಗಳೂರು.

151
U/S
5/2/21

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಶ್ರೀನಿವಾಸ್ ಎಂ. (ಮಂಡ್ಯ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1179ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಶ್ರೀನಿವಾಸ್ ಎಂ. (ಮಂಡ್ಯ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1179ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

ಲಲಿತಾಬಾಯಿ.ಕೆ

**(ಲಲಿತಾಬಾಯಿ ಕೆ.)**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

4/2

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1179 |
| ಸದಸ್ಯರ ಹೆಸರು | : | ಶ್ರೀ ಶ್ರೀನಿವಾಸ್ ಎಂ. (ಮಂಡ್ಯ) |
| ಉತ್ತರಿಸಬೇಕಾದ ದಿನಾಂಕ | : | 05-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಡ್ಯ ನಗರಸಭೆಗೆ 2018ರ ಆಯವ್ಯಯದಲ್ಲಿ ರೂ 50.00 ಕೋಟಿಗಳ ವಿಶೇಷ ಅನುದಾನ ಘೋಷಿಸಿದ್ದು, ಈ ಅನುದಾನದಲ್ಲಿ ಕಾಮಗಾರಿಗಳ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದ್ದು, ತದನಂತರ ಹಿಂಪಡೆಯಲಾಗಿರುವ ಅನುದಾನವನ್ನು ಈವರೆಗೂ ಬಿಡುಗಡೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>2018-19ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 161ರಲ್ಲಿ ಮಂಡ್ಯ ನಗರದ ಸರ್ವತೋಮುಖ ಅಭಿವೃದ್ಧಿಗಾಗಿ ರೂ.50.00ಕೋಟಿ ವಿಶೇಷ ಪ್ಯಾಕೇಜ್ ಘೋಷಿಸಲಾಗಿರುತ್ತದೆ.<br><br>ಮಂಡ್ಯ ನಗರಕ್ಕೆ ಘೋಷಿಸಲಾದ ವಿಶೇಷ ಪ್ಯಾಕೇಜ್ ಅಡಿ ಕೈಗೊಳ್ಳುವ ಕಾಮಗಾರಿಗಳ ಕ್ರಿಯಾ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 310 ಪಿಆರ್‌ಜೆ 2018 ದಿ: 30-01-2018 ರನ್ವಯ ಅನುಮೋದನೆ ನೀಡಿ ಆದೇಶಿಸಲಾಗಿರುತ್ತದೆ.<br><br>ನಂತರ, ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಮಂಡ್ಯ ವಿಭಾಗದವರಿಗೆ ಠೇವಣೀಕರಿಸಲು ರೂ.5.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲು ಪೌರಾಡಳಿತ ನಿರ್ದೇಶನಾಲಯ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಅದರಂತೆ, ಸರ್ಕಾರ ಆದೇಶ ಸಂಖ್ಯೆ: ನಅಇ 198 ಎಸ್‌ಎಫ್‌ಸಿ 2020 ದಿ: 23-07-2020ರನ್ವಯ ಮಂಡ್ಯ ನಗರಸಭೆಗೆ ರೂ.2.50 ಕೋಟಿ ಅನುದಾನವನ್ನು ಬಿಡುಗಡೆಗೊಳಿಸಿ ಆದೇಶಿಸಲಾಗಿರುತ್ತದೆ.<br><br>ತದನಂತರ, ರಾಜ್ಯದಲ್ಲಿನ ಪ್ರಸ್ತುತ ಆರ್ಥಿಕ ಪರಿಸ್ಥಿತಿಯು ಕಷ್ಟಕರವಾಗಿರುವುದರಿಂದ 2018ರ ಆಯವ್ಯಯ ಭಾಷಣದಲ್ಲಿ ಮಂಡ್ಯ ನಗರಕ್ಕೆ ಘೋಷಿಸಿರುವ ವಿಶೇಷ ಅನುದಾನ ರೂ.50.00 ಕೋಟಿಗಳಡಿ ಕೈಗೊಳ್ಳುವ ಕಾಮಗಾರಿಗಳನ್ನು ಕೈಬಿಡಲು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಎಫ್.ಡಿ 424 ವೆಚ್ಚ-9/2020, ದಿನಾಂಕ: 03-11-2020 ರಲ್ಲಿ ನಿರ್ದೇಶನ ನೀಡಿದ ಮೇರೆಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 269 ಎಸ್‌ಎಫ್‌ಸಿ 2020 ದಿ: 05-11-2020ರನ್ವಯ ತಡೆಹಿಡಿದು ಆದೇಶಿಸಲಾಗಿರುತ್ತದೆ.<br><br>ಆರ್ಥಿಕ ಇಲಾಖೆಯು ಸದರಿ ಕಾಮಗಾರಿಗಳನ್ನು ಮುಂದುವರೆಸಲು ಅನುದಾನವನ್ನು ಮಂಜೂರು ಮಾಡಿದಲ್ಲಿ ಪರಿಶೀಲಿಸಲಾಗುವುದು. |
| (ಆ) | ಬಂದಿದ್ದಲ್ಲಿ, ಅನುದಾನ ಬಿಡುಗಡೆಗೊಳಿಸದಿರಲು ಕಾರಣವೇನು; | |
| (ಇ) | ಸದರಿ ಅನುದಾನವನ್ನು ಯಾವಾಗ ಬಿಡುಗಡೆಗೊಳಿಸಲಾಗುವುದು? (ವಿವರ ನೀಡುವುದು) | |

ಕಡತ ಸಂಖ್ಯೆ:ನಅಇ 50 ಎಸ್.ಎಫ್.ಸಿ 2021

(ಸಹಿ)

(ಎನ್. ನಾಗರಾಜ್, ಎಂ.ಟಿ.ಬಿ.)
ಪೌರಾಡಳಿತ ಹಾಗೂ ಸಕ್ಕರೆ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 21 ಎಸಿಎಂ 2021 (ಇ)

ಕರ್ನಾಟಕ ಸರ್ಕಾರ ಸಚಿವಾಲಯ
ವಿಕಾಸಸೌಧ
ಬೆಂಗಳೂರು, ದಿನಾಂಕ 04.02.2021.

90
UIS
5/2/21

**ಇವರಿಂದ:**
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ : ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಾಗೇಂದ್ರ ಎಲ್. (ಚಾಮರಾಜ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1114 ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ : ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.1114/2021, ದಿನಾಂಕ 27.01.2021.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಾಗೇಂದ್ರ ಎಲ್. (ಚಾಮರಾಜ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1114 ಕ್ಕೆ ಉತ್ತರದ 25 ಪ್ರತಿಗಳನ್ನು ಮುಂದಿನ ಅಗತ್ಯ ಕ್ರಮಕ್ಕಾಗಿ ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

**(ಎಸ್. ವೀಣಾ)**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ
(ಮಹಾನಗರಪಾಲಿಕೆ-2)

**ಕರ್ನಾಟಕ ವಿಧಾನ ಸಭೆ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1114 |
| ಸದಸ್ಯರ ಹೆಸರು | : | ಶ್ರೀ ನಾಗೇಂದ್ರ ಎಲ್. (ಚಾಮರಾಜ) |
| ಉತ್ತರಿಸಬೇಕಾದ ದಿನಾಂಕ | : | 05.02.2021 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ನಗರದಲ್ಲಿರುವ " ಇರ್ವಿನ್ " ರಸ್ತೆಯನ್ನು ಅಗಲೀಕರಣ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಾಮಗಾರಿ ಯಾವ ಹಂತದಲ್ಲಿದೆ; | ಹೌದು.<br>ಮೈಸೂರು ನಗರದಲ್ಲಿರುವ ಇರ್ವಿನ್ ರಸ್ತೆಯನ್ನು ಅಗಲೀಕರಣ ಮಾಡುವ ಕಾಮಗಾರಿಯು ಭಾಗಶಃ ಪೂರ್ಣಗೊಂಡಿದ್ದು, ವಕ್ಫ್ ಇಲಾಖೆಗೆ ಸೇರಿದ ಜುಮ್ಮಾ ಮಸೀದಿ ಕಟ್ಟಡ ಮತ್ತು ಒಂದು ಖಾಸಗಿ ಸ್ವತ್ತುಗಳ ವಿಸ್ತೀರ್ಣದಲ್ಲಿ ಚರಂಡಿ ಹಾಗೂ ರಸ್ತೆ ನಿರ್ಮಾಣ ಮಾಡಬೇಕಾಗಿರುತ್ತದೆ. ಉಳಿದಂತೆ ರಸ್ತೆ ವಿಭಜಕ ಹಾಗೂ ವಿದ್ಯುತ್ ಬೀದಿ ದೀಪ ಅಳವಡಿಸುವ ಕಾಮಗಾರಿ ಕೈಗೊಳ್ಳಬೇಕಾಗಿದ್ದು, ಸದರಿ ಸ್ವತ್ತುಗಳ ಭೂಸ್ವಾಧೀನ ಪಡಿಸಿಕೊಳ್ಳಬೇಕಾಗಿರುವುದರಿಂದ ಕಾಮಗಾರಿ ಸ್ಥಗಿತಗೊಂಡಿರುತ್ತದೆ. |
| ಆ) | ಈ ರಸ್ತೆಯಲ್ಲಿ ಒಟ್ಟು ಯಾವ ಯಾವ ಧಾರ್ಮಿಕ ಕಟ್ಟಡಗಳಿವೆ; ಇವುಗಳಲ್ಲಿ ಯಾವ ಯಾವ ಧಾರ್ಮಿಕ ಕಟ್ಟಡಗಳನ್ನು ತೆರವುಗೊಳಿಸಲಾಗಿದೆ; ತೆರವುಗೊಳಿಸದೆ ಇರುವ ಕಟ್ಟಡಗಳಾವುವು; | ಇರ್ವಿನ್ ರಸ್ತೆಯಲ್ಲಿ ಒಟ್ಟು 3 ಧಾರ್ಮಿಕ ಕಟ್ಟಡಗಳಿವೆ.<br>ಅದರಲ್ಲಿ ಕಾಳಮ್ಮ ದೇವಸ್ಥಾನಕ್ಕೆ ಸೇರಿದ ಮಳಿಗೆ, ಮುಜರಾಯಿ ಇಲಾಖೆಗೆ ಸೇರಿದ ಪಂಚಮುಖಿ ಆಂಜನೇಯ ಸ್ವಾಮಿ ದೇವಸ್ಥಾನ ಹಾಗೂ ವಕ್ಫ್ ಇಲಾಖೆಗೆ ಸೇರಿದ ಜುಮ್ಮಾ ಮಸೀದಿಯು ಇರುತ್ತದೆ. ಕಾಳಮ್ಮ ದೇವಸ್ಥಾನಕ್ಕೆ ಸೇರಿದ ಮಳಿಗೆಯನ್ನು ಹಾಗೂ ಪಂಚಮುಖಿ ಆಂಜನೇಯ ಸ್ವಾಮಿ ಕಾಂಪೌಂಡ್ ಅನ್ನು ತೆರವುಗೊಳಿಸಲಾಗಿದ್ದು, ವಕ್ಫ್ ಇಲಾಖೆಗೆ ಸೇರಿದ ಜುಮ್ಮಾ ಮಸೀದಿಯ ಕಟ್ಟಡವನ್ನು ತೆರವುಗೊಳಿಸಬೇಕಾಗಿರುತ್ತದೆ. |
| ಇ) | ಈ ರಸ್ತೆಯಲ್ಲಿ ಧಾರ್ಮಿಕ ಕಟ್ಟಡಗಳನ್ನು ತೆರವುಗೊಳಿಸಲು ಎಷ್ಟು ಕಾಲಾವಕಾಶ ನೀಡಲಾಗಿದೆ; ಕಾಲಮಿತಿಯಲ್ಲಿ ತೆರವುಗೊಳಿಸದೆ ಇದ್ದಲ್ಲಿ ಕೈಗೊಂಡಿರುವ ಕ್ರಮಗಳೇನು ? | ವಕ್ಫ್ ಇಲಾಖೆಗೆ ಸೇರಿದ ಜುಮ್ಮಾ ಮಸೀದಿಯ ಕಟ್ಟಡಕ್ಕೆ ಸಂಬಂಧಿಸಿದಂತೆ, ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಯ್ದೆ-2013 ರನ್ವಯ ರಸ್ತೆ ಅಗಲೀಕರಣಕ್ಕೆ ಅವಶ್ಯವಿರುವ ಜಾಗವನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಕ್ರಮವಹಿಸಿ, ದಿನಾಂಕ: 08-01-2021 ರಂದು ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲಾಗಿದ್ದು ಪ್ರಕ್ರಿಯೆ ಜಾರಿಯಲ್ಲಿದೆ. |

ನಅಇ 21 ಎಸಿಎಂ 2021 (ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ : ಸಿಒ 52 ಎಂಆರ್ಇ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:03.02.2021

ಇವರಿಂದ :

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬಹುಮಹಡಿಕಟ್ಟಡ,
ಬೆಂಗಳೂರು.

62

45
5/2/21

ಇವರಿಗೆ :

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ
ಬೆಂಗಳೂರು.

ಮಾನ್ಯರೇ,

ವಿಷಯ : ಕರ್ನಾಟಕ ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1065ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ : ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.1065/2021, ದಿನಾಂಕ:27.01.2021.

*****

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೃಷ್ಣಾರೆಡ್ಡಿ ಎಂ. ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1065ಕ್ಕೆ ದಿನಾಂಕ:05.02.2021ರಂದು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಉತ್ತರವನ್ನು ಪಿ.ಡಿ.ಎಫ್ ಮಾದರಿಯಲ್ಲಿ ಇ-ಮೇಲ್ ಸಂಖ್ಯೆ: dsqb-kla-kar@nic.in ರ ಮೂಲಕ ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಬಿ.ಎಸ್.ಮಂಜುನಾಥ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಹಕಾರ ಇಲಾಖೆ.

3/2

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1065
2. ಸದಸ್ಯರ ಹೆಸರು : ಶ್ರೀ ಕೃಷ್ಣಾರೆಡ್ಡಿ ಎಂ
3. ಉತ್ತರಿಸಬೇಕಾದ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

***

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | 2014–15ನೇ ಸಾಲಿನ ನಬಾರ್ಡ್ ಸಂಸ್ಥೆಯ ಡಬ್ಲ್ಯೂ.ಐ.ಎಫ್ ಯೋಜನೆಯಡಿ ಚಿಕ್ಕಬಳ್ಳಾಪುರ ಜಿಲ್ಲೆ ಚಿಂತಾಮಣಿ ತಾಲ್ಲೂಕಿನ ಮುಖ್ಯ ಕೃಷಿ ಮಾರುಕಟ್ಟೆ ಪ್ರಾಂಗಣದಲ್ಲಿ ಸಿಮೆಂಟ್ ರಸ್ತೆ ಹಾಗೂ ಚರಂಡಿ ಕಾಮಗಾರಿಗಳನ್ನು ಕೈಗೊಳ್ಳಲು ರೂ.483.00 ಲಕ್ಷ ಅನುದಾನವನ್ನು ಮೀಸಲಿರಿಸಿದ್ದು, ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆಯೇ ; | ಹೌದು, ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. |
| ಆ | ಕಾಮಗಾರಿಯನ್ನು ಕೈಗೆತ್ತಿಕೊಂಡಿದ್ದಲ್ಲಿ, ಅದು ಯಾವ ಹಂತದಲ್ಲಿದೆ (ವಿವರ ನೀಡುವುದು) ; | ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಇ | ಕೈಗೊಳ್ಳದಿದ್ದಲ್ಲಿ, ಇದುವರೆವಿಗೂ ಕಾಮಗಾರಿ ಪ್ರಾರಂಭವಾಗದಿರಲು ಕಾರಣಗಳೇನು ; | ಉದ್ಭವಿಸುವುದಿಲ್ಲ. |
| ಈ | ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಉದಾಸೀನತೆ ತೋರಿದ ಸಂಬಂಧಪಟ್ಟ ಅಧಿಕಾರಿ/ನೌಕರರ ವಿರುದ್ಧ ಕ್ರಮ ಜರುಗಿಸಲಾಗಿದೆಯೇ (ವಿವರ ನೀಡುವುದು) ? | ಉದ್ಭವಿಸುವುದಿಲ್ಲ. |

**ಸಂಖ್ಯೆ:ಸಿಒ 51 ಎಂಆರ್‌ಇ 2021**

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಸಿಒ 22 ಸಿಸಿಬಿ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 04.02.2021

4b 45 5/2/2

**ಇಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬೆಂಗಳೂರು-560001.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ** : ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1081ಕ್ಕೆ ಉತ್ತರ ಒದಗಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1081ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

Radha H.C 4/2

**(ಹೆಚ್. ಸಿ. ರಾಧ)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಸಹಕಾರ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆಯ ಸದಸ್ಯರು : ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1081

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2017ನೇ ಸಾಲಿನಿಂದ ಕಲಬುರಗಿ ಜಿಲ್ಲೆ ಆಳಂದ ಡಿ.ಸಿ.ಸಿ. ಬ್ಯಾಂಕ್‌ನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳು ಇಲ್ಲಿಯವರೆಗೆ ರೂ.8,30,00,000 ಹಣ ದುರುಪಯೋಗಪಡಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, 2019-20 ನೇ ಸಾಲಿನ ಲೆಕ್ಕಪರಿಶೋಧನೆಯಲ್ಲಿ ಲೆಕ್ಕಪರಿಶೋಧಕರು ಸಲ್ಲಿಸಿರುವ ಆಂತರಿಕ ಟಿಪ್ಪಣಿಯಲ್ಲಿ ಕಲಬುರಗಿ ಮತ್ತು ಯಾದಗಿರಿ ಡಿಸಿಸಿ ಬ್ಯಾಂಕಿನ ಆಳಂದ ಶಾಖೆಯಲ್ಲಿ ರೂ.8.32 ಕೋಟಿ ರಷ್ಟು ಹಣ ಕೊರತೆಯಾಗಿರುತ್ತದೆ ಎಂದು ತಿಳಿಸಿರುತ್ತದೆ. |
| ಆ) | ಬಂದಿದ್ದಲ್ಲಿ, ತಪ್ಪಿತಸ್ಥ ಸಿಬ್ಬಂದಿಗಳು ಯಾರು; ಅವರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; (ಸಿಬ್ಬಂದಿಗಳ ಹೆಸರು ಮತ್ತು ಅವರು ದುರುಪಯೋಗ ಪಡಿಸಿಕೊಂಡಿರುವ ಮೊತ್ತದ ಸಂಪೂರ್ಣ ವಿವರ ನೀಡುವುದು) | ಲೆಕ್ಕಪರಿಶೋಧಕರ ಆಂತರಿಕ ವರದಿಯನ್ವಯ ವಿಚಾರಣೆ ಕಾಯ್ದಿರಿಸಿ, ಬ್ಯಾಂಕಿನ ಆಳಂದ ಶಾಖೆಯ ವ್ಯವಸ್ಥಾಪಕರಾದ ಶ್ರೀ ರವೀಂದ್ರ ಕುಮಾರ. ಎನ್. ಹಾಗೂ ನಗದು ಗುಮಾಸ್ತರಾದ ಶ್ರೀ ಲಕ್ಷ್ಮಣ ಪವಾರ ಇವರು ಜಂಟಿಯಾಗಿ ತಪ್ಪಿತಸ್ಥರೆಂದು. ಗುರುತಿಸಿ ಅಮಾನತ್ತು ಮಾಡಲಾಗಿದೆ.<br><br>2019-20ನೇ ಸಾಲಿನಲ್ಲಿ ರೂ.35.83 ಲಕ್ಷ ಮಾತ್ರ ಹಣ ದುರುಪಯೋಗವಾಗಿದೆ ಎಂದು ಹಾಗೂ ರೂ.3.61 ಕೋಟಿ ಮೊತ್ತಗಳ ವ್ಯವಹಾರವು ಅನುಮಾನಾಸ್ಪದವಾಗಿದೆ ಎಂದು ವರದಿ ಸ್ವೀಕೃತವಾದ ಕಾರಣ 2017ನೇ ಸಾಲಿನಿಂದ ಅಪಾರ ಮೊತ್ತದ ಹಣ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ತನಿಖೆ ಮಾಡಿ ವರದಿ ಸಲ್ಲಿಸುವಂತೆ ಬ್ಯಾಂಕಿನ ಆದೇಶ ಸಂಖ್ಯೆ:ಡಿಸಿಸಿಬಿ/ಆಮಸಿ/2020-21/3230/3235 ದಿನಾಂಕ: 02-09-2020ರನ್ವಯ ಬ್ಯಾಂಕಿನ ಸಿಬ್ಬಂದಿಗಳಾದ ಶ್ರೀ ಬಿ.ಜಿ.ಕೊಲ್ಲೂರ್, ವಸೂಲಾಧಿಕಾರಿ, ಶ್ರೀ ಮುರಳಿಧರ್. ಶಿವರೆಡ್ಡಿ, ಸಿಬ್ಬಂದಿ ಶಾಖೆಯ ಮುಖ್ಯಸ್ಥರು, ಶ್ರೀ ಲಿಂಗನಗೌಡ ಪಾಟೀಲ, ಶಾಹಪೂರ್ ಶಾಖೆಯ ಮೇಲ್ವಿಚಾರಕರು ಮತ್ತು ಶ್ರೀ ಶಿವರಾಜ್ ಮಠಪತಿ, ಸಿ.ಬಿ.ಎಸ್ ತಂತ್ರಾಂಶದ ಮೇಲ್ವಿಚಾರಕರು ಇವರಗಳ ತಂಡವನ್ನು ರಚಿಸಿದ್ದು, ತನಿಖಾ ತಂಡ ದಿನಾಂಕ:18-01-2021 ರಂದು ಮಧ್ಯಂತರ ವರದಿ ಸಲ್ಲಿಸಿದ್ದು, ತನಿಖೆ ಪೂರ್ಣಗೊಳಿಸಿ ಅಂತಿಮ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ. ವರದಿ ಬಂದ ನಂತರ ಹಣ ದುರುಪಯೋಗ ಮೊತ್ತ |

| | | |
|---|---|---|
| | | ಗುರುತಿಸಲು ಸಾಧ್ಯವಾಗುತ್ತದೆ.<br>ಮುಂದುವರೆದು, ಶ್ರೀ ರವೀಂದ್ರ ಕುಮಾರ. ಎನ್. ಹಾಗೂ ಲಕ್ಷ್ಮಣ ಪವಾರ ರವರ ವಿರುದ್ಧ ಬ್ಯಾಂಕಿನ ಆದೇಶ ಸಂಖ್ಯೆ:ಮುಕಾನಿ/ಆಸಿವಿ/ಸೇ.ಅ:2020-21/3226 ಮತ್ತು 3228 ದಿನಾಂಕ:03-09-2020 ರನ್ವಯ ಸೇವೆಯಿಂದ ಅಮಾನತ್ತು ಮಾಡಲಾಗಿರುತ್ತದೆ. |
| ಇ) | ತಪ್ಪಿತಸ್ಥರಿಂದ ದುರುಪಯೋಗ ಪಡಿಸಿಕೊಂಡಿರುವ ಹಣವನ್ನು ಹಿಂಪಡೆಯಲಾಗಿದೆಯೇ; | ತಪ್ಪಿತಸ್ಥರು ದುರುಪಯೋಗ ಪಡಿಸಿಕೊಂಡಿರುವ ಮೊತ್ತದಲ್ಲಿ ರೂ 1.10 ಕೋಟಿಗಳಷ್ಟು ಬ್ಯಾಂಕ್ ಖಾತೆಗೆ ಜಂಟಿಯಾಗಿ ಸಂದಾಯ ಮಾಡಿದ್ದು, ಅಂತಿಮ ವರದಿ ಬಂದ ನಂತರ ಬಾಕಿ ಮೊತ್ತ ವಸೂಲು ಮಾಡಲು ಕ್ರಮವಿಡಲಾಗುವುದು. |
| ಈ) | ಇಲ್ಲದಿದ್ದಲ್ಲಿ, ದುರುಪಯೋಗ ಪಡಿಸಿಕೊಂಡಿರುವ ಹಣವನ್ನು ಹಿಂ ಪಡೆಯಲು ವಿಳಂಬ ವಾಗುತ್ತಿರುವುದಕ್ಕೆ ಕಾರಣವೇನು? (ಸಂಪೂರ್ಣ ವಿವರ ನೀಡುವುದು) | ದುರುಪಯೋಗಪಡಿಸಿಕೊಂಡ ಹಣ ವಸೂಲಾತಿಗೆ ಯಾವುದೇ ವಿಳಂಬವಾಗಿರುವುದಿಲ್ಲ. ತನಿಖೆ ತಂಡದ ಅಂತಿಮ ವರದಿ ಬಂದ ನಂತರ ನಿಖರವಾದ ಹಣ ದುರುಪಯೋಗದ ಮೊತ್ತವನ್ನು ಕಂಡುಹಿಡಿದು ಸಂಬಂದಪಟ್ಟವರಿಂದ ವಸೂಲಾತಿ ಮಾಡಲು ದಿನಾಂಕ: 31.01.2021 ರಂದು ಜರುಗಿದ ಆಡಳಿತ ಮಂಡಳಿ ಸಭೆಯಲ್ಲಿ ನಿರ್ಣಯಿಸಲಾಗಿದೆ. ಅದರಂತೆ ಶೀಘ್ರವಾಗಿ ತನಿಖಾ ವರದಿ ನೀಡಲು ತನಿಖಾ ತಂಡಕ್ಕೆ ನಿರ್ದೇಶನ ನೀಡಲಾಗಿರುತ್ತದೆ. |

ಕಡತ ಸಂಖ್ಯೆ: ಸಿಒ 22 ಸಿಸಿಬಿ 2021

(ಎಸ್. ಟಿ. ಸೋಮಶೇಖರ್)

ಸಹಕಾರ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ: ಸಿಒ 06 ಸಿಎಲ್ಎಂ 2021 (ಇ)

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 03.02.2021

(94) U/S 05/2/21

**ಇಂದ,**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬೆಂಗಳೂರು-1.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಾಗೇಶ್ ಬಿ.ಸಿ. (ತಿಪಟೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1206 ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ತಮ್ಮ ಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/9ಅ/ಚುಗು-ಚುರ.ಪ್ರಶ್ನೆ/06/2021, ದಿ:30.01.2021.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀ ನಾಗೇಶ್ ಬಿ.ಸಿ. (ತಿಪಟೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1206ಕ್ಕೆ ಸಂಬಂಧಿಸಿದ ಉತ್ತರವನ್ನು ಸಿದ್ಧಪಡಿಸಿ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ

Radha H C
**(ಹೆಚ್.ಸಿ. ರಾಧ)**
ಸರ್ಕಾರದ ಅಧೀನ ಕಾರ್ಯದರ್ಶಿ-3(ಪ್ರ),
ಸಹಕಾರ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ನಾಗೇಶ್.ಬಿ.ಸಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1206

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸಹಕಾರ ಸಂಘಗಳ ಸಂಖ್ಯೆಗಳೆಷ್ಟು; ಅವುಗಳ ಪೈಕಿ 2019-20ರ ಅಂತ್ಯಕ್ಕೆ ಲೆಕ್ಕ ಪರಿಶೋಧನೆ ಪೂರ್ಣಗೊಂಡಿರುವ ಸಹಕಾರ ಸಂಘಗಳ ಸಂಖ್ಯೆಗಳೆಷ್ಟು; (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ದಿನಾಂಕ: 31-03-2020ರ ಅಂತ್ಯಕ್ಕೆ ರಾಜ್ಯದಲ್ಲಿ ಒಟ್ಟು 43597 ಸಹಕಾರ ಸಂಘಗಳಿದ್ದು, ಈ ಪೈಕಿ 2019-20ರ ಅಂತ್ಯಕ್ಕೆ 28270 ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಪೂರ್ಣಗೊಂಡಿದ್ದು, ಜಿಲ್ಲಾವಾರು ಹಾಗೂ ತಾಲ್ಲೂಕಾವಾರು ವಿವರ ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ) | ಹಾಗಿದ್ದಲ್ಲಿ, ಲೆಕ್ಕ ಪರಿಶೋಧನೆ ಪೂರ್ಣಗೊಳ್ಳದಿರುವುದಕ್ಕೆ ಕಾರಣವೇನು; (ವಿವರ ನೀಡುವುದು) | ದಿನಾಂಕ: 31-03-2020ರ ಅಂತ್ಯಕ್ಕೆ ಒಟ್ಟು 15327 ಸಹಕಾರ ಸಂಘಗಳು ಈ ಕೆಳಕಂಡ ಕಾರಣಗಳಿಂದಾಗಿ ಲೆಕ್ಕಪರಿಶೋಧನೆಯಾಗದೆ ಬಾಕಿ ಉಳಿದಿರುತ್ತದೆ. ವಿವರ ಅನುಬಂಧ-2ರಲ್ಲಿ ನೀಡಲಾಗಿದೆ.<br>1. ನೋಂದಾಯಿತ ವಿಳಾಸದಲ್ಲಿ ಪುಸ್ತಕ ಮತ್ತು ದಾಖಲಾತಿಗಳು ಲಭ್ಯವಿಲ್ಲದಿರುವುದು.<br>2. ಸಂಘದ ಪುಸ್ತಕಗಳು ನ್ಯಾಯಾಲಯದಲ್ಲಿ / ಆರಕ್ಷಕ ಠಾಣೆಯಲ್ಲಿದ್ದು, ಲೆಕ್ಕಪರಿಶೋಧನೆಗೆ ಹಾಜರು ಪಡಿಸಲು ಸಾಧ್ಯವಾಗದಿರುವುದು.<br>3. ಲೆಕ್ಕ ಪತ್ರಗಳು ಅಪೂರ್ಣವಾಗಿದ್ದು, ಲೆಕ್ಕಪರಿಶೋಧನೆಗೆ ಹಾಜರು ಪಡಿಸದೇ ಇರುವುದು.<br>4. ಲೆಕ್ಕಪರಿಶೋಧನೆ ಪ್ರಗತಿಯಲ್ಲಿರುವುದು.<br>5. ಸಹಕಾರ ಸಂಘಗಳು ಲೆಕ್ಕಪರಿಶೋಧನೆಗೆ ಆಯ್ಕೆ ಮಾಡಿಕೊಂಡ ಸನ್ನದು ಲೆಕ್ಕಪರಿಶೋಧಕರು ಲೆಕ್ಕಪರಿಶೋಧನೆ ನಿರ್ವಹಿಸದಿರುವುದು.<br>6. ಸಮಾಪನೆಗೊಂಡ ಸಹಕಾರ ಸಂಘಗಳು ಲೆಕ್ಕಪರಿಶೋಧನೆಯಾಗದೇ ಇರುವುದು ಇತ್ಯಾದಿ. |
| ಇ) | ಲೆಕ್ಕ ಪರಿಶೋಧನೆ ಪೂರ್ಣಗೊಳ್ಳದಿರುವ ಸಹಕಾರ ಸಂಘಗಳ ಲೆಕ್ಕ ಪರಿಶೋಧನೆಯನ್ನು ಯಾವ ಅವಧಿಯೊಳಗೆ ಪೂರ್ಣಗೊಳಿಸಲಾಗುವುದು, (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ಲೆಕ್ಕಪರಿಶೋಧನೆಗೆ ಬಾಕಿ ಇರುವ ಸಹಕಾರ ಸಂಘಗಳ ಲೆಕ್ಕಪರಿಶೋಧನೆಯನ್ನು ಆದ್ಯತೆ ಮೇಲೆ ಪೂರೈಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

| ಈ) | ಲೆಕ್ಕಪರಿಶೋಧನೆ ಪೂರ್ಣಗೊಂಡಿರುವ ಸಹಕಾರ ಸಂಘಗಳಲ್ಲಿ ಹಣದುರುಪಯೋಗ ಕಂಡು ಬಂದಿದ್ದಲ್ಲಿ ಅಂತಹ ಸಹಕಾರ ಸಂಘಗಳ ವಿರುದ್ಧ ತೆಗೆದುಕೊಂಡ ಕ್ರಮಗಳೇನು? (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ಸಹಕಾರ ಸಂಘಗಳ ಲೆಕ್ಕಪರಿಶೋಧನಾ ವೇಳೆಯಲ್ಲಿ ಹಣದುರುಪಯೋಗ ಕಂಡುಬಂದಲ್ಲಿ ಹಣದುರುಪಯೋಗದ ಕುರಿತು ಲೆಕ್ಕಪರಿಶೋಧನಾ ವರದಿಯಲ್ಲಿ ದಾಖಲಿಸುತ್ತಿದ್ದು, ವರದಿ ಆಧರಿಸಿ ಇಲಾಖಾ ವತಿಯಿಂದ ದುರುಪಯೋಗದ ಮೊತ್ತ ವಸೂಲಾತಿಗೆ ಸಿವಿಲ್ ಹಾಗೂ ಕ್ರಿಮಿನಲ್ ಕ್ರಮಗಳನ್ನು ಇಡಲಾಗುತ್ತಿದೆ. ಆಡಳಿತ ಮಂಡಳಿ ದುರುಪಯೋಗದಲ್ಲಿ ಬಾಗಿಯಾಗಿದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 29 (ಸಿ) ರೀತ್ಯಾ ಆಡಳಿತ ಮಂಡಳಿ ಸದಸ್ಯರನ್ನು ಅನರ್ಹಗೊಳಿಸಲು ಕ್ರಮವಿಡಲಾಗುತ್ತಿದೆ. |
|---|---|---|

ಸಂಖ್ಯೆ: ಸಿಒ 06 ಸಿಎಲ್‌ಎಂ 2021 (ಇ)

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ನಾಗೇಶ್.ಬಿ.ಸಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1206

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸಹಕಾರ ಸಂಘಗಳ ಸಂಖ್ಯೆಗಳೆಷ್ಟು; ಅವುಗಳ ಪೈಕಿ 2019-20ರ ಅಂತ್ಯಕ್ಕೆ ಲೆಕ್ಕ ಪರಿಶೋಧನೆ ಪೂರ್ಣಗೊಂಡಿರುವ ಸಹಕಾರ ಸಂಘಗಳ ಸಂಖ್ಯೆಗಳೆಷ್ಟು; (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ದಿನಾಂಕ: 31-03-2020ರ ಅಂತ್ಯಕ್ಕೆ ರಾಜ್ಯದಲ್ಲಿ ಒಟ್ಟು 43597 ಸಹಕಾರ ಸಂಘಗಳಿದ್ದು, ಈ ಪೈಕಿ 2019-20ರ ಅಂತ್ಯಕ್ಕೆ 28270 ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಪೂರ್ಣಗೊಂಡಿದ್ದು, ಜಿಲ್ಲಾವಾರು ಹಾಗೂ ತಾಲ್ಲೂಕಾವಾರು ವಿವರ ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ) | ಹಾಗಿದ್ದಲ್ಲಿ, ಲೆಕ್ಕ ಪರಿಶೋಧನೆ ಪೂರ್ಣಗೊಳ್ಳದಿರುವುದಕ್ಕೆ ಕಾರಣವೇನು; (ವಿವರ ನೀಡುವುದು) | ದಿನಾಂಕ: 31-03-2020ರ ಅಂತ್ಯಕ್ಕೆ ಒಟ್ಟು 15327 ಸಹಕಾರ ಸಂಘಗಳು ಈ ಕೆಳಕಂಡ ಕಾರಣಗಳಿಂದಾಗಿ ಲೆಕ್ಕಪರಿಶೋಧನೆಯಾಗದೆ ಬಾಕಿ ಉಳಿದಿರುತ್ತದೆ. ವಿವರ ಅನುಬಂಧ-2ರಲ್ಲಿ ನೀಡಲಾಗಿದೆ.<br><br>1. ನೋಂದಾಯಿತ ವಿಳಾಸದಲ್ಲಿ ಪುಸ್ತಕ ಮತ್ತು ದಾಖಲಾತಿಗಳು ಲಭ್ಯವಿಲ್ಲದಿರುವುದು.<br>2. ಸಂಘದ ಪುಸ್ತಕಗಳು ನ್ಯಾಯಾಲಯದಲ್ಲಿ / ಆರಕ್ಷಕ ಠಾಣೆಯಲ್ಲಿದ್ದು, ಲೆಕ್ಕಪರಿಶೋಧನೆಗೆ ಹಾಜರು ಪಡಿಸಲು ಸಾಧ್ಯವಾಗದಿರುವುದು.<br>3. ಲೆಕ್ಕ ಪತ್ರಗಳು ಅಪೂರ್ಣವಾಗಿದ್ದು, ಲೆಕ್ಕಪರಿಶೋಧನೆಗೆ ಹಾಜರು ಪಡಿಸದೇ ಇರುವುದು.<br>4. ಲೆಕ್ಕಪರಿಶೋಧನೆ ಪ್ರಗತಿಯಲ್ಲಿರುವುದು.<br>5. ಸಹಕಾರ ಸಂಘಗಳು ಲೆಕ್ಕಪರಿಶೋಧನೆಗೆ ಆಯ್ಕೆ ಮಾಡಿಕೊಂಡ ಸನ್ನದು ಲೆಕ್ಕಪರಿಶೋಧಕರು ಲೆಕ್ಕಪರಿಶೋಧನೆ ನಿರ್ವಹಿಸದಿರುವುದು.<br>6. ಸಮಾಪನೆಗೊಂಡ ಸಹಕಾರ ಸಂಘಗಳು ಲೆಕ್ಕಪರಿಶೋಧನೆಯಾಗದೇ ಇರುವುದು ಇತ್ಯಾದಿ. |
| ಇ) | ಲೆಕ್ಕ ಪರಿಶೋಧನೆ ಪೂರ್ಣಗೊಳ್ಳದಿರುವ ಸಹಕಾರ ಸಂಘಗಳ ಲೆಕ್ಕ ಪರಿಶೋಧನೆಯನ್ನು ಯಾವ ಅವಧಿಯೊಳಗೆ ಪೂರ್ಣಗೊಳಿಸಲಾಗುವುದು, (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ಲೆಕ್ಕಪರಿಶೋಧನೆಗೆ ಬಾಕಿ ಇರುವ ಸಹಕಾರ ಸಂಘಗಳ ಲೆಕ್ಕಪರಿಶೋಧನೆಯನ್ನು ಆದ್ಯತೆ ಮೇಲೆ ಪೂರೈಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

| ಈ) | ಲೆಕ್ಕಪರಿಶೋಧನೆ ಪೂರ್ಣಗೊಂಡಿರುವ ಸಹಕಾರ ಸಂಘಗಳಲ್ಲಿ ಹಣದುರುಪಯೋಗ ಕಂಡು ಬಂದಿದ್ದಲ್ಲಿ ಅಂತಹ ಸಹಕಾರ ಸಂಘಗಳ ವಿರುದ್ಧ ತೆಗೆದುಕೊಂಡ ಕ್ರಮಗಳೇನು? (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ಸಹಕಾರ ಸಂಘಗಳ ಲೆಕ್ಕಪರಿಶೋಧನಾ ವೇಳೆಯಲ್ಲಿ ಹಣದುರುಪಯೋಗ ಕಂಡುಬಂದಲ್ಲಿ ಹಣದುರುಪಯೋಗದ ಕುರಿತು ಲೆಕ್ಕಪರಿಶೋಧನಾ ವರದಿಯಲ್ಲಿ ದಾಖಲಿಸುತ್ತಿದ್ದು, ವರದಿ ಆಧರಿಸಿ ಇಲಾಖಾ ವತಿಯಿಂದ ದುರುಪಯೋಗದ ಮೊತ್ತ ವಸೂಲಾತಿಗೆ ಸಿವಿಲ್ ಹಾಗೂ ಕ್ರಿಮಿನಲ್ ಕ್ರಮಗಳನ್ನು ಇಡಲಾಗುತ್ತಿದೆ. ಆಡಳಿತ ಮಂಡಳಿ ದುರುಪಯೋಗದಲ್ಲಿ ಬಾಗಿಯಾಗಿದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 29 (ಸಿ) ರೀತ್ಯಾ ಆಡಳಿತ ಮಂಡಳಿ ಸದಸ್ಯರನ್ನು ಅನರ್ಹಗೊಳಿಸಲು ಕ್ರಮವಿಡಲಾಗುತ್ತಿದೆ. |
|---|---|---|

ಸಂಖ್ಯೆ: ಸಿಒ 06 ಸಿಎಲ್‌ಎಂ 2021 (ಇ)

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ನಾಗೇಶ್.ಬಿ.ಸಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1206

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸಹಕಾರ ಸಂಘಗಳ ಸಂಖ್ಯೆಗಳೆಷ್ಟು; ಅವುಗಳ ಪೈಕಿ 2019-20ರ ಅಂತ್ಯಕ್ಕೆ ಲೆಕ್ಕ ಪರಿಶೋಧನೆ ಪೂರ್ಣಗೊಂಡಿರುವ ಸಹಕಾರ ಸಂಘಗಳ ಸಂಖ್ಯೆಗಳೆಷ್ಟು; (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ದಿನಾಂಕ: 31-03-2020ರ ಅಂತ್ಯಕ್ಕೆ ರಾಜ್ಯದಲ್ಲಿ ಒಟ್ಟು 43597 ಸಹಕಾರ ಸಂಘಗಳಿದ್ದು, ಈ ಪೈಕಿ 2019-20ರ ಅಂತ್ಯಕ್ಕೆ 28270 ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಪೂರ್ಣಗೊಂಡಿದ್ದು, ಜಿಲ್ಲಾವಾರು ಹಾಗೂ ತಾಲ್ಲೂಕಾವಾರು ವಿವರ ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ) | ಹಾಗಿದ್ದಲ್ಲಿ, ಲೆಕ್ಕ ಪರಿಶೋಧನೆ ಪೂರ್ಣಗೊಳ್ಳದಿರುವುದಕ್ಕೆ ಕಾರಣವೇನು; (ವಿವರ ನೀಡುವುದು) | ದಿನಾಂಕ: 31-03-2020ರ ಅಂತ್ಯಕ್ಕೆ ಒಟ್ಟು 15327 ಸಹಕಾರ ಸಂಘಗಳು ಈ ಕೆಳಕಂಡ ಕಾರಣಗಳಿಂದಾಗಿ ಲೆಕ್ಕಪರಿಶೋಧನೆಯಾಗದೆ ಬಾಕಿ ಉಳಿದಿರುತ್ತದೆ. ವಿವರ ಅನುಬಂಧ-2ರಲ್ಲಿ ನೀಡಲಾಗಿದೆ.<br><br>1. ನೋಂದಾಯಿತ ವಿಳಾಸದಲ್ಲಿ ಪುಸ್ತಕ ಮತ್ತು ದಾಖಲಾತಿಗಳು ಲಭ್ಯವಿಲ್ಲದಿರುವುದು.<br>2. ಸಂಘದ ಪುಸ್ತಕಗಳು ನ್ಯಾಯಾಲಯದಲ್ಲಿ / ಆರಕ್ಷಕ ಠಾಣೆಯಲ್ಲಿದ್ದು, ಲೆಕ್ಕಪರಿಶೋಧನೆಗೆ ಹಾಜರು ಪಡಿಸಲು ಸಾಧ್ಯವಾಗದಿರುವುದು.<br>3. ಲೆಕ್ಕ ಪತ್ರಗಳು ಅಪೂರ್ಣವಾಗಿದ್ದು, ಲೆಕ್ಕಪರಿಶೋಧನೆಗೆ ಹಾಜರು ಪಡಿಸದೇ ಇರುವುದು.<br>4. ಲೆಕ್ಕಪರಿಶೋಧನೆ ಪ್ರಗತಿಯಲ್ಲಿರುವುದು.<br>5. ಸಹಕಾರ ಸಂಘಗಳು ಲೆಕ್ಕಪರಿಶೋಧನೆಗೆ ಆಯ್ಕೆ ಮಾಡಿಕೊಂಡ ಸನ್ನದು ಲೆಕ್ಕಪರಿಶೋಧಕರು ಲೆಕ್ಕಪರಿಶೋಧನೆ ನಿರ್ವಹಿಸದಿರುವುದು.<br>6. ಸಮಾಪನೆಗೊಂಡ ಸಹಕಾರ ಸಂಘಗಳು ಲೆಕ್ಕಪರಿಶೋಧನೆಯಾಗದೇ ಇರುವುದು ಇತ್ಯಾದಿ. |
| ಇ) | ಲೆಕ್ಕ ಪರಿಶೋಧನೆ ಪೂರ್ಣಗೊಳ್ಳದಿರುವ ಸಹಕಾರ ಸಂಘಗಳ ಲೆಕ್ಕ ಪರಿಶೋಧನೆಯನ್ನು ಯಾವ ಅವಧಿಯೊಳಗೆ ಪೂರ್ಣಗೊಳಿಸಲಾಗುವುದು, (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ಲೆಕ್ಕಪರಿಶೋಧನೆಗೆ ಬಾಕಿ ಇರುವ ಸಹಕಾರ ಸಂಘಗಳ ಲೆಕ್ಕಪರಿಶೋಧನೆಯನ್ನು ಆದ್ಯತೆ ಮೇಲೆ ಪೂರೈಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

| ಈ) | ಲೆಕ್ಕಪರಿಶೋಧನೆ ಪೂರ್ಣಗೊಂಡಿರುವ ಸಹಕಾರ ಸಂಘಗಳಲ್ಲಿ ಹಣದುರುಪಯೋಗ ಕಂಡು ಬಂದಿದ್ದಲ್ಲಿ ಅಂತಹ ಸಹಕಾರ ಸಂಘಗಳ ವಿರುದ್ಧ ತೆಗೆದುಕೊಂಡ ಕ್ರಮಗಳೇನು? (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ಸಹಕಾರ ಸಂಘಗಳ ಲೆಕ್ಕಪರಿಶೋಧನಾ ವೇಳೆಯಲ್ಲಿ ಹಣದುರುಪಯೋಗ ಕಂಡುಬಂದಲ್ಲಿ ಹಣದುರುಪಯೋಗದ ಕುರಿತು ಲೆಕ್ಕಪರಿಶೋಧನಾ ವರದಿಯಲ್ಲಿ ದಾಖಲಿಸುತ್ತಿದ್ದು, ವರದಿ ಆಧರಿಸಿ ಇಲಾಖಾ ವತಿಯಿಂದ ದುರುಪಯೋಗದ ಮೊತ್ತ ವಸೂಲಾತಿಗೆ ಸಿವಿಲ್ ಹಾಗೂ ಕ್ರಿಮಿನಲ್ ಕ್ರಮಗಳನ್ನು ಇಡಲಾಗುತ್ತಿದೆ. ಆಡಳಿತ ಮಂಡಳಿ ದುರುಪಯೋಗದಲ್ಲಿ ಬಾಗಿಯಾಗಿದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 29 (ಸಿ) ರೀತ್ಯಾ ಆಡಳಿತ ಮಂಡಳಿ ಸದಸ್ಯರನ್ನು ಅನರ್ಹಗೊಳಿಸಲು ಕ್ರಮವಿಡಲಾಗುತ್ತಿದೆ. |
|---|---|---|

ಸಂಖ್ಯೆ: ಸಿಒ 06 ಸಿಎಲ್ಎಂ 2021 (ಇ)

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಸಿಒ 29 ಸಿಎಲ್‌ಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 03.02.2021

**ಇಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬೆಂಗಳೂರು-560001.

78

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ** : ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಲಿಂಗೇಶ ಕೆ.ಎಸ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1104ಕ್ಕೆ ಉತ್ತರ ಒದಗಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಲಿಂಗೇಶ ಕೆ.ಎಸ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1104ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

Radha H.C
**(ಹೆಚ್. ಸಿ. ರಾಧ)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಸಹಕಾರ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಲಿಂಗೇಶ್ ಕೆ.ಎಸ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1104**

ಉತ್ತರಿಸಬೇಕಾದ ದಿನಾಂಕ : **05.02.2021**

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸಹಕಾರ ಬ್ಯಾಂಕುಗಳ ಮೂಲಕ ಸ್ವಸಹಾಯ ಸಂಘಗಳಿಗೆ ಶೇ. 3ರ ಬಡ್ಡಿದರದಲ್ಲಿ 'ಕಾಯಕ' ಯೋಜನೆಯನ್ನು ರೂಪಿಸಲಾಗಿದ್ದು, ಈ ಯೋಜನೆಯಲ್ಲಿ ಜಿಲ್ಲಾವಾರು ಎಷ್ಟು ಸ್ವಸಹಾಯ ಸಂಘಗಳಿಗೆ 'ಕಾಯಕ' ಯೋಜನೆಯ ಫಲಾನುಭವಿಗಳಾಗಿ ಆಯ್ಕೆ ಮಾಡಲಾಗಿದೆ; ಹಾಗೂ 2020-21 ನೇ ಸಾಲಿನ ಆಯವ್ಯಯದಲ್ಲಿ ಎಷ್ಟು ಹಣವನ್ನು ಸದರಿ ಯೋಜನೆಗೆ ಮೀಸಲಿಡಲಾಗಿದೆ; ಹಾಗೂ ಬ್ಯಾಂಕುಗಳಿಂದ ಎಷ್ಟು ಸಾಲ ನೀಡಲಾಗಿದೆ; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಸಿಒ 146 ಸಿಎಲ್ಎಸ್ 2018, ಬೆಂಗಳೂರು, ದಿನಾಂಕ: 20.09.2018 ರಂತೆ ಸಹಕಾರ ಸಂಸ್ಥೆಗಳಿಂದ ರಚಿಸಲ್ಪಡುವ ಸ್ವ-ಸಹಾಯ ಗುಂಪುಗಳ ಸದಸ್ಯರ ಕೌಶಲ್ಯಾಭಿವೃದ್ಧಿ ಮತ್ತು ಉದ್ಯಮಶೀಲತೆಯನ್ನು ವೃದ್ಧಿಗೊಳಿಸುವುದರ ಮೂಲಕ ಸ್ವ-ಉದ್ಯೋಗವನ್ನು ಪ್ರೋತ್ಸಾಹಿಸಿ, ಆದಾಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಡಿ.ಸಿ.ಸಿ. ಬ್ಯಾಂಕುಗಳು ಮತ್ತು ಪಟ್ಟಣ ಬ್ಯಾಂಕುಗಳ ಮೂಲಕ ಗರಿಷ್ಠ ರೂ.10.00 ಲಕ್ಷದವರೆಗೆ ಸ್ವಸಹಾಯ ಗುಂಪುಗಳು ಸಾಲವನ್ನು ಪಡೆಯಲು ಅವಕಾಶವಿದ್ದು, ರೂ.5.00 ಲಕ್ಷದವರೆಗಿನ ಸಾಲಕ್ಕೆ ಶೂನ್ಯ ಬಡ್ಡಿ ಮತ್ತು ರೂ.5.00 ರಿಂದ ರೂ.10.00 ಲಕ್ಷದವರೆಗಿನ ಸಾಲಕ್ಕೆ ಶೇ.4 ರ ಬಡ್ಡಿದರ ಅನ್ವಯವಾಗುವಂತೆ 'ಕಾಯಕ' ಯೋಜನೆಯನ್ನು ಜಾರಿಗೆ ತರಲಾಗಿದ್ದು, ಬಡ್ಡಿ ಸಹಾಯಧನ ಸರ್ಕಾರದಿಂದ ಭರಿಸಲಾಗುತ್ತಿದೆ. 2020-21 ನೇ ಸಾಲಿನಲ್ಲಿ ಈ ಯೋಜನೆ ಮುಂದುವರೆದಿದ್ದು ಬಡ್ಡಿ ಸಹಾಯಧನವಾಗಿ ರೂ.90.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಲಾಗಿದೆ.<br>ಈ ಯೋಜನೆಯಡಿಯಲ್ಲಿ 2020-21 ನೇ ಸಾಲಿನಲ್ಲಿ ರಾಜ್ಯದಲ್ಲಿರುವ ಜಿಲ್ಲೆಗಳ ವ್ಯಾಪ್ತಿಯಲ್ಲಿನ ಡಿ.ಸಿ.ಸಿ ಬ್ಯಾಂಕುಗಳಿಂದ ಒಟ್ಟು 540 ಸ್ವ-ಸಹಾಯ ಸಂಘಗಳನ್ನು ಫಲಾನುಭವಿಗಳಾಗಿ ಆಯ್ಕೆ ಮಾಡಿದ್ದು, ಈ ಪೈಕಿ 245 ಸ್ವ-ಸಹಾಯ ಸಂಘಗಳಿಗೆ ರೂ.1081.21 ಲಕ್ಷಗಳ ಮೊತ್ತದ ಸಾಲವನ್ನು ವಿತರಿಸಲಾಗಿರುತ್ತದೆ. ಜಿಲ್ಲಾವಾರು ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |
| (ಆ) | 'ಕಾಯಕ' ಯೋಜನೆಯಲ್ಲಿ ಎಷ್ಟು ಹಣವನ್ನು ಸಹಕಾರಿ ಬ್ಯಾಂಕುಗಳಿಗೆ ಬಿಡುಗಡೆ ಮಾಡಲಾಗಿದೆ; ಬಿಡುಗಡೆ ಮಾಡಲು ಬಾಕಿ ಎಷ್ಟಿರುತ್ತದೆ; ಸದರಿ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಸಾಲ ನೀಡಲು ಸರ್ಕಾರಕ್ಕೆ ಇರುವ ತೊಂದರೆಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕುಗಳು 'ಕಾಯಕ' ಯೋಜನೆಯಡಿ ಸ್ವ-ಸಹಾಯ ಸಂಘಗಳಿಗೆ ವಿತರಿಸಿದ್ದ ಸಾಲಕ್ಕೆ ರೂ.67.50 ಲಕ್ಷಗಳ ಬಡ್ಡಿ ಸಹಾಯಧನ ಬಿಡುಗಡೆಯಾಗಿದೆ. ಈ ಪೈಕಿ ರೂ.46.91 ಲಕ್ಷಗಳನ್ನು ಬ್ಯಾಂಕುಗಳಿಗೆ ಬಿಡುಗಡೆ ಮಾಡಲಾಗಿದ್ದು, ರೂ.20.59 ಲಕ್ಷಗಳನ್ನು ಬಿಡುಗಡೆ ಮಾಡಲು ಕ್ರಮವಿಡಲಾಗಿದೆ. ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |

**ಸಂಖ್ಯೆ: ಸಿಒ 29 ಸಿಎಲ್ಎಸ್ 2021**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ: HORTI 52 HGM 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 04-02-2021

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

4/2
120
5/2/21

ಇವರಿಗೆ:
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

**ವಿಷಯ** :ಶ್ರೀ ರೇವಣ್ಣ ಹೆಚ್.ಡಿ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1123ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ರೇವಣ್ಣ ಹೆಚ್.ಡಿ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1123ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

T.V. Sunandamma 04/02/2021
(ಟಿ.ವಿ.ಸುನಂದಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ
4/2

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ : 1123
ವಿಧಾನ ಸಭೆ ಸದಸ್ಯರ ಹೆಸರು : ಶ್ರೀ.ರೇವಣ್ಣ, ಹೆಚ್.ಡಿ
ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು
ಉತ್ತರಿಸಬೇಕಾದ ದಿನಾಂಕ : 05-02-2021

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆಯಲ್ಲಿ ಆಲೂಗಡ್ಡೆ ಮುಂಗಾರು ಹಂಗಾಮಿನಲ್ಲಿ ಪ್ರಮುಖ ವಾಣಿಜ್ಯ ಬೆಳೆಯಾಗಿ ಬೆಳೆಯಲಾಗುತ್ತಿರುವುದು ನಿಜವೇ; | ಹೌದು |
| ಆ) | ಆಲೂಗಡ್ಡೆ ಬೆಳೆಯು ಋತುಮಾನದಲ್ಲಿ ತಲೆದೋರುವ ಹಲವಾರು ರೋಗ ಮತ್ತು ಕೀಟಗಳಿಗೆ ತುತ್ತಾಗುವ ಬೆಳೆಯಾಗಿದ್ದು, ಆಯಾ ಋತುಮಾನದಲ್ಲಿ ಬರುವ ವಿವಿಧ ಅಂಗಮಾರಿ ರೋಗ, ನಂಜು ರೋಗ ಹಾಗೂ ನುಸಿ ಕೀಟಬಾಧೆ ಇವುಗಳಿಂದ ಆಲೂಗಡ್ಡೆ ಬೆಳೆಗೆ ಹಾನಿಯಾಗುತ್ತಿರುವ ಕಾರಣ ಆಲೂಗಡ್ಡೆ ಬೆಳೆಗಾರರು ಪ್ರತಿ ವರ್ಷ ನಷ್ಟವನ್ನು ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಬೆಳೆನಷ್ಟದ ಜೊತೆಗೆ 2019-20 ನೇ ಮುಂಗಾರು ಹಂಗಾಮಿನಲ್ಲಿ ಬಿದ್ದ ಅತಿಯಾದ ಮಳೆಯಿಂದಾಗಿ ಆಲೂಗಡ್ಡೆ ಬೆಳೆಯು ಹಾನಿಗೊಳಗಾಗಿ ರೈತರು ತೀವ್ರ ಆರ್ಥಿಕ ಸಂಕಷ್ಟಕ್ಕೆ ಸಿಲುಕಿದ್ದು, ಅಲ್ಲದೇ, ಈ ಬೇಸಿಗೆ ಹಂಗಾಮಿನಲ್ಲಿ ರೈತರು ಬೆಳೆದ ತರಕಾರಿ ಮತ್ತು ಬೆಳೆಗಳನ್ನು ಕೊರೋನಾ ಕೋವಿಡ್-19 ವೈರಸ್ ಸೋಂಕಿನಿಂದಾಗಿ ಇಡೀ ದೇಶದಲ್ಲಿ ಲಾಕ್ ಡೌನ್ ನಲ್ಲಿ ವಿಧಿಸಲಾದ ಹಿನ್ನೆಲೆಯಲ್ಲಿ ರೈತರಿ ಬೆಳೆದ ಆಲೂಗಡ್ಡೆ ಬೆಳೆಗೆ ಸರಿಯಾದ ಮಾರುಕಟ್ಟೆ ಲಭ್ಯವಿಲ್ಲದೆ ಹಾಗೂ ಸಾಗಾಣಿಕೆ ತೊಂದರೆಗಳಿಂದಾಗಿ ಪ್ರಸಕ್ತ ವರ್ಷದಲ್ಲಿ ರೈತರು ತೀವ್ರತರವಾದ ನಷ್ಟವನ್ನು ಹೊಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು | 2019- 20ನೇ ಸಾಲಿನ ಮುಂಗಾರು ಹಂಗಾಮಿನಲ್ಲಿ ಅತಿಯಾದ ಮಳೆ ಹಾಗೂ ಕಡಿಮೆ ಮೊಳಕೆ ಹಾಗೂ ಕೊಳೆತಿರುವ ಬಗ್ಗೆ ಸಮೀಕ್ಷೆ ಕೈಗೊಂಡು ಒಟ್ಟು 4126ಹೆ ಪ್ರದೇಶದಲ್ಲಿ ಬೆಳೆ ಹಾನಿಯಾಗಿದ್ದು,NDRF/SDRF ಮಾರ್ಗಸೂಚಿಯನ್ವಯ ಹಾನಿಯಾದ ಕೃಷಿ ಮತ್ತು ತೋಟಗಾರಿಕೆ ಬೆಳೆಗಳು ಸೇರಿದಂತೆ ಹಾಸನ ಜಿಲ್ಲೆಯ ಒಟ್ಟು24994 ರೈತರಿಗೆ ರೂ. 41.22 ಕೋಟಿ ಮೊತ್ತದ ಪರಿಹಾರ ಧನ ಕಂದಾಯ ಇಲಾಖೆವತಿಯಿಂದ ವಿತರಿಸಲು ಕ್ರಮವಹಿಸಲಾಗಿರುತ್ತದೆ. ಹಾಸನ ಜಿಲ್ಲೆಯಲ್ಲಿ ಆಲೂಗಡ್ಡೆ ಬೆಳೆಯು ಆಗಸ್ಟ ಹಾಗು ಸೆಪ್ಟೆಂಬರ್ ತಿಂಗಳುಗಳಲ್ಲಿ ಸಂಪೂರ್ಣವಾಗಿ ಕಟಾವಾಗುತ್ತದೆ ಹಾಗೂ ಆಗಸ್ಟ 2019 ರ ಮಾಹೆಯ ಅಂತ್ಯಕ್ಕೆ ಪ್ರತಿ ಕ್ವಿಂಟಾಲ್ಗೆ ರೂ.1500 ಹಾಗೂ ಸೆಪ್ಟೆಂಬರ್ 2019 ರ ಅಂತ್ಯಕ್ಕೆ ರೂ.2150 ಪ್ರತಿ ಕ್ವಿಂಟಾಲ್ಗೆ ಮಾರುಕಟ್ಟೆ ಧಾರಣೆ ಇದ್ದುದರಿಂದ ರೈತರಿಗೆ ಉತ್ತಮ ಬೆಲೆಗೆ ಮಾರಾಟವಾಗಿರುವುದರಿಂದ ಕೋವಿಡ್-19 ಲಾಕ್ ಡೌನ್ ನಿಂದಾಗಿ ಆಲೂಗಡ್ಡೆ ರೈತರಿಗೆ ನಷ್ಟ ಸಂಭವಿಸಿರುವುದಿಲ್ಲ. |

| | | |
|---|---|---|
| ಈ) | ಆಲೂಗಡ್ಡೆ ಬೆಳೆಗಾರರ ಮೇಲೆ ಬೀಳುವ ಆರ್ಥಿಕ ಹೊರೆಯನ್ನು ತಗ್ಗಿಸುವ ಉದ್ದೇಶದಿಂದ ರೈತರಿಗೆ ಶೇ. 50 ರಂತೆ ಬಿತ್ತನೆ ಬೀಜ ಮತ್ತು ಸಸ್ಯಸಂರಕ್ಷಣಾ ಔಷಧಿಗಳ ಖರೀದಿಗಾಗಿ ಸಹಾಯಧನ ಸೌಲಭ್ಯವನ್ನು ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | 2019-20 ನೇ ಸಾಲಿನಲ್ಲಿ ಆಲೂಗಡ್ಡೆ ಬೆಳೆಗಾರರಿಗೆ ಪ್ರೋತ್ಸಾಹಧನ ಯೋಜನೆಯಡಿ ಆಲೂಗಡ್ಡೆ ಬೆಳೆಯುವ ರೈತರಿಗೆ ಶೇ. 50 ರಂತೆ ಬಿತ್ತನೆ ಬೀಜ ಮತ್ತು ಸಸ್ಯ ಸಂರಕ್ಷಣಾ ಔಷಧಿಗಳ ಖರೀದಿಗಾಗಿ ಸಹಾಯಧನ ಕಾರ್ಯಕ್ರಮವನ್ನು ಕೈಗೊಂಡಿದ್ದು, ಆಲೂಗಡ್ಡೆ ಬೆಳೆಯುವ ಪ್ರಮುಖ 8 ಜಿಲ್ಲೆಗಳಲ್ಲಿ 15,051 ಹೆ. ಪ್ರದೇಶದಲ್ಲಿ ಅನುಷ್ಠಾನಗೊಳಿಸಿದ್ದು, ರೂ. 1660.52 ಲಕ್ಷಗಳ ಸಹಾಯಧನ ಸೌಲಭ್ಯವನ್ನು 24,061 ರೈತ ಫಲಾನುಭವಿಗಳಿಗೆ ಪಾವತಿಸ ಲಾಗಿರುತ್ತದೆ. ಹಾಸನ ಜಿಲ್ಲೆಯಲ್ಲಿ ಒಟ್ಟು 8766.57 ಹೆ. ಪ್ರದೇಶದಲ್ಲಿ ಆಲೂಗಡ್ಡೆ ಬೆಳೆದ 14782 ರೈತರಿಗೆ ರೂ.1080.13 ಲಕ್ಷಗಳ ಸಹಾಯಧನ ನೀಡಲಾಗಿ ರುತ್ತದೆ.<br><br>2020-21 ನೇ ಸಾಲಿನಲ್ಲಿ ಕೋವಿಡ್-19 ಹಿನ್ನಲೆಯಲ್ಲಿ ರಾಜ್ಯದಲ್ಲಿ ಆರ್ಥಿಕ ಸಂಕಷ್ಟ ಇದ್ದ ಕಾರಣ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಿರುವುದಿಲ್ಲ |
| ಉ) | 2019-20 ನೇ ಸಾಲಿನಲ್ಲಿ ಆಲೂಗಡ್ಡೆ ಬೆಳೆಗಾರರಿಗೆ ಪ್ರೋತ್ಸಾಹಧನ ಯೋಜನೆ ಯಲ್ಲಿ ರೈತರು ಆಲೂಗಡ್ಡೆಯನ್ನು ಬೆಳೆಯಲು ಅಗತ್ಯವಿರುವ ಬಿತ್ತನೆ ಬೀಜ ಮತ್ತು ಸಸ್ಯಸಂರಕ್ಷಣಾ ಔಷಧಿಗಳು ಸಮಯಕ್ಕೆ ಸರಿಯಾಗಿ ರೈತರಿಗೆ ಲಭ್ಯವಿರುವಂತೆ ಹಾಗು ಆಲೂಗಡ್ಡೆ ಬೆಳೆಗಾರರಿಗೆ ಶೇ. 50 ರ ಸಬ್ಸಿಡಿ ನೀಡಲು ಸರ್ಕಾರ ಕ್ರಮ ಕೈಗೊಳ್ಳುವುದೇ; | |

HORTI 52 HGM 2021

(ಆರ್.ಶಂಕರ್)
**ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**

## ಕರ್ನಾಟಕ ಸರ್ಕಾರ

ಸಂಖ್ಯೆ: HORTI 59 HGM 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 04-02-2021

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

44 (14) 5/2/21

**ಇವರಿಗೆ:**
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

**ವಿಷಯ** : ಡಾ: ಅಜಯ್ ಧರ್ಮಸಿಂಗ್, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1163ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಡಾ: ಅಜಯ್ ಧರ್ಮಸಿಂಗ್, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1163ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

T.V. Sunandamma 04/02/2021
**(ಟಿ.ವಿ.ಸುನಂದಮ್ಮ)**
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಕರ್ನಾಟಕ ವಿಧಾನಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1163

**ಸದಸ್ಯರ ಹೆಸರು** : ಡಾ||ಅಜಯ್ ಧರ್ಮಸಿಂಗ್

**ಉತ್ತರಿಸಬೇಕಾದ ಸಚಿವರು** : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

**ಉತ್ತರಿಸಬೇಕಾದ ದಿನಾಂಕ** : 05.02.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೋವಿಡ್-19ರ ಲಾಕ್ ಡೌನ್ ಸಮಯದಲ್ಲಿ ತೋಟಗಾರಿಕಾ ಬೆಳೆ ಅವಲಂಬಿಸಿದ ರೈತರು ತೀವ್ರ ಸಂಕಷ್ಟಕ್ಕೊಳಗಾಗಿ ಪರಿಹಾರ ಕೋರಿ ಅರ್ಜಿಸಲ್ಲಿಸಿರುವ 650 ಮಂದಿಗೆ ಕೇವಲ ಬೆಳೆ ಸಮೀಕ್ಷೆ ನಡೆಸಿ ಪರಿಹಾರ ವಿತರಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2019-20 ನೇ ಕೋವಿಡ್-19 ರ ಲಾಕ್ ಡೌನ್ ಸಮಯದಲ್ಲಿ ಹಾನಿಗೊಳಗಾದ ತೋಟಗಾರಿಕೆ ಬೆಳೆಗಾರರಲ್ಲಿ ಬೆಳೆ ಸಮೀಕ್ಷೆಯಲ್ಲಿ ನಮೂದಾಗಿರುವ ಅರ್ಹ 83 (ಹಣ್ಣು ಮತ್ತು ತರಕಾರಿ) ಫಲಾನುಭವಿಗಳಿಗೆ ಪರಿಹಾರವನ್ನು ವಿತರಿಸಲಾಗಿರುತ್ತದೆ. ಆದರೆ, ಉಳಿದ 650 ಅರ್ಜಿದಾರರು ಬೆಳೆ ಸಮೀಕ್ಷೆಯಲ್ಲಿ ನಮೂದಾಗದ ಕಾರಣ ಪರಿಹಾರ ನೀಡಲಾಗಿರುವುದಿಲ್ಲ. |
| ಆ | ಹಾಗಿದ್ದಲ್ಲಿ, ಸದರಿ ಅರ್ಜಿ ಸಲ್ಲಿಸಿರುವ ರೈತರಿಗೆ ಬೆಳೆ ಪರಿಹಾರ ನೀಡಲು ಯಾವ ಕಾಲ ಮಿತಿಯಲ್ಲಿ ಕ್ರಮಗಳನ್ನು ಸರ್ಕಾರ ಜರುಗಿಸಲಿದೆ (ವಿವರ ನೀಡುವುದು)? | ಬೆಳೆ ಸಮೀಕ್ಷೆಯಲ್ಲಿ ನಮೂದಾಗದ ಬೆಳೆಗಾರರಿಗೆ ಪರಿಹಾರ ನೀಡಲು ಅವಕಾಶವಿರುವುದಿಲ್ಲ. |

HORTI 59 HGM 2021

(ಆರ್.ಶಂಕರ್)

**ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**

ಕರ್ನಾಟಕ ಸರ್ಕಾರ

ಸಂಖ್ಯೆ: HORTI 60 HGM 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 04-02-2021

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಇವರಿಗೆ:
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ :ಶ್ರೀ ರಾಜೇಶ್ ನಾಯಕ್ ಯು.ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1174ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ರಾಜೇಶ್ ನಾಯಕ್ ಯು.ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1174ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

T.V. Sunandamma 04/02/2021
(ಟಿ.ವಿ.ಸುನಂದಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

**ಕರ್ನಾಟಕ ಸರ್ಕಾರ**

ಸಂಖ್ಯೆ:ನಅಇ 59 ಎಸ್‌ಎಫ್ ಸಿ 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 05-02-2021.

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ಬೆಂಗಳೂರು.

4/5 160 5/2/4

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1107ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂದಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1107ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,
ಲಲಿತಾಬಾಯಿ.ಕೆ

**(ಲಲಿತಾಬಾಯಿ ಕೆ.)**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1107 |
| ಸದಸ್ಯರ ಹೆಸರು | : | ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) |
| ಉತ್ತರಿಸಬೇಕಾದ ದಿನಾಂಕ | : | 05-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಪಟ್ಟಣ ಪಂಚಾಯಿತ್‌ಗಳ ಸಮಗ್ರ ಅಭಿವೃದ್ಧಿಗಾಗಿ ಸರ್ಕಾರ ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿರುವ ಯೋಜನೆಗಳು ಯಾವುವು; | ಪಟ್ಟಣ ಪಂಚಾಯಿತಿಗಳ ಸಮಗ್ರ ಅಭಿವೃದ್ಧಿಗೆ ಸರ್ಕಾರದಿಂದ ರೂಪಿಸಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು ಈ ಕೆಳಕಂಡಂತಿದೆ;<br>1. ಸ್ವಚ್ಛ ಭಾರತ್ ಮಿಷನ್ ಯೋಜನೆ<br>2. 14ನೇ ಹಣಕಾಸು ಆಯೋಗದ ಅನುದಾನ (2015-16 ರಿಂದ 2019-20)<br>3. 15ನೇ ಹಣಕಾಸು ಆಯೋಗದ ಅನುದಾನ (2020-21)<br>4. ನಗರೋತ್ಥಾನ ಹಂತ -3<br>5. ಎಸ್.ಎಫ್.ಸಿ. ಅನುದಾನ<br>• ಎಸ್.ಎಫ್.ಸಿ. ಮುಕ್ತನಿಧಿ,<br>• ಎಸ್.ಎಫ್.ಸಿ. ಕುಡಿಯುವ ನೀರು,<br>• ಎಸ್.ಎಫ್.ಸಿ. ವಿಶೇಷ ಅನುದಾನ. |
| (ಆ) | ಗ್ರಾಮ ಪಂಚಾಯಿತ್‌ಗಳನ್ನು ಪಟ್ಟಣ ಪಂಚಾಯಿತ್‌ಗಳಾಗಿ ಮೇಲ್ದರ್ಜೆಗೇರಿಸುವುದರಿಂದ ಸರ್ಕಾರದಿಂದ ಲಭ್ಯವಾಗುವ ಅನುದಾನಗಳು, ಯೋಜನಾ ಸೌಲಭ್ಯಗಳು ಹಾಗೂ ಸದರಿ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡುವ ದಿಶೆಯಲ್ಲಿ ಸರ್ಕಾರದ ಕಾಲ ನಿಗದಿತ ಕ್ರಮಗಳೇನು; | ಹೊಸದಾಗಿ ಮೇಲ್ದರ್ಜೆಗೇರಿದ ಪಟ್ಟಣ ಪಂಚಾಯಿತಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡಲು <u>ಸರ್ಕಾರದಿಂದ ಲಭ್ಯವಾಗುವ ಅನುದಾನಗಳು ಮತ್ತು ಯೋಜನಾ ಸೌಲಭ್ಯಗಳು ಈ ಕೆಳಕಂಡಂತಿವೆ:</u><br><br>**<u>ಸ್ವಚ್ಛ ಭಾರತ ಮಿಷನ್ ಯೋಜನೆಯಡಿಯಲ್ಲಿ</u>**,<br>• ವೈಯಕ್ತಿಕ ಶೌಚಾಲಯಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ಸ್ವಚ್ಛ ಭಾರತ್ ಮಿಷನ್(ನಗರ) ಪೋರ್ಟಲ್‌ನಲ್ಲಿ ಅನುಮೋದನೆಗೊಂಡ ವೈಯಕ್ತಿಕ ಶೌಚಾಲಯಗಳ ಅರ್ಜಿಗಳ ಆಧಾರದ ಮೇಲೆ ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ.<br>• ಸಾರ್ವಜನಿಕ/ಸಮುದಾಯ ಶೌಚಾಲಯಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ನಿಗದಿತ ನಮೂನೆಯಲ್ಲಿ ದಾಖಲಾತಿಗಳನ್ನು ಸಲ್ಲಿಸಿದ ಆಧಾರದ ಮೇಲೆ ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ.<br><br>• ಘನತ್ಯಾಜ್ಯ ವಸ್ತು ನಿರ್ವಹಣೆಗೆ ಸಂಬಂಧಿಸಿದಂತೆ ನಗರಸ್ಥಳೀಯ ಸಂಸ್ಥೆಗಳಲ್ಲಿನ ತ್ಯಾಜ್ಯ ನಿರ್ವಹಣೆ |

ಪ್ರಸ್ತುತ ಸ್ಥಿತಿಗತಿ ಹಾಗೂ ಮುಂದಿನ 5 ವರ್ಷಗಳಿಗೆ ತ್ಯಾಜ್ಯ ನಿರ್ವಹಣೆಗೆ ಅಗತ್ಯವಿರುವ ಸಾಮರ್ಥ್ಯವನ್ನು ವಿಶ್ಲೇಷಿಸಿ ಯೋಜನಾ ವರದಿಗಳನ್ನು ಸಿದ್ಧಪಡಿಸಿ ಸರ್ಕಾರದ ಅನುಮೋದನೆ ನೀಡಲಾಗಿದ್ದು, ಸದರಿ ಯೋಜನಾ ವರದಿಗಳ ಬಂಡವಾಳ ಮೊತ್ತದ ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ.

14ನೇ ಹಣಕಾಸು ಆಯೋಗ / 15ನೇ ಹಣಕಾಸು ಆಯೋಗದ ಅನುದಾನವನ್ನು ಮೇಲ್ದರ್ಜೆಗೇರಿಸಿದ ಪಟ್ಟಣ ಪಂಚಾಯಿತಿಗಳನ್ನು ಪರಿಗಣಿಸಿ ಅನುದಾನ ಹಂಚಿಕೆ ಮಾಡಿ ಬಿಡುಗಡೆಗೊಳಿಸಲಾಗುವುದು. ಸದರಿ ಅನುದಾನಗಳಡಿ ಅಗತ್ಯ ಮೂಲಭೂತ ಸೌಕರ್ಯ ಕಾಮಗಾರಿಗಳಾದ ಕುಡಿಯುವ ನೀರು ಸರಬರಾಜು, ನೈರ್ಮಲೀಕರಣ ಮತ್ತು ಒಳಚರಂಡಿ ವ್ಯವಸ್ಥೆ, ಘನತ್ಯಾಜ್ಯ ವಸ್ತು ನಿರ್ವಹಣೆ, ಮಳೆ ನೀರು ಚರಂಡಿ, ರಸ್ತೆ ಮತ್ತು ಪಾದಚಾರಿ ಮಾರ್ಗಗಳ ನಿರ್ವಹಣೆ, ಬೀದಿ ದೀಪಗಳ ನಿರ್ವಹಣೆ ಮತ್ತು ಸಮುದಾಯ ಆಸ್ತಿಗಳ ನಿರ್ವಹಣೆ ಕಾಮಗಾರಿಗಳನ್ನು ಮಾರ್ಗಸೂಚಿಯಲ್ಲಿ ತಿಳಿಸಲಾಗಿದೆ. ಅದರಂತೆ ನಗರ / ಪಟ್ಟಣಗಳ ಅವಶ್ಯಕತೆಗನುಗುಣವಾಗಿ ಕಾಮಗಾರಿಗಳನ್ನು ಕೈಗೊಂಡು ಅನುಷ್ಠಾನಗೊಳಿಸಲಾಗುತ್ತಿದೆ.

ನಗರೋತ್ಥಾನ (ಮುನಿಸಿಪಾಲಿಟಿ)-3ನೇ ಹಂತದ ಯೋಜನೆಯನ್ನು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರವು 2016-17 ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದ್ದು, ಈ ಯೋಜನೆಯಡಿ ಹೊಸದಾಗಿ ಸೃಜಿಸಲಾದ 38 ಪಟ್ಟಣ ಪಂಚಾಯಿತಿಗಳಿಗೆ ರೂ.5.00 ಕೋಟಿಗಳನ್ನು ಮತ್ತು ಹಾಲಿ ಇದ್ದಂತಹ 51 ಪಟ್ಟಣ ಪಂಚಾಯಿತಿಗಳಿಗೆ ರೂ.2.00 ಕೋಟಿಗಳನ್ನು ಹಂಚಿಕೆ ಮಾಡಿ ಸರ್ಕಾರದ ಆದೇಶ ಸಂಖ್ಯೆ: ನಅಇ 88 ಸಮಸ 2105, ಬೆಂಗಳೂರು, ದಿನಾಂಕ: 29-11-2016ರಲ್ಲಿ ಆದೇಶಿಸಲಾಗಿರುತ್ತದೆ.

ಸದರಿ ಯೋಜನೆಯಡಿ ಕುಡಿಯುವ ನೀರಿನ ಕಾಮಗಾರಿಗಳು, ರಸ್ತೆ ಅಭಿವೃದ್ಧಿ ಕಾಮಗಾರಿಗಳು, ಮಳೆ ನೀರು ಚರಂಡಿ ಕಾಮಗಾರಿಗಳು, ಒಳ ಚರಂಡಿ ಕಾಮಗಾರಿಗಳು ಹಾಗೂ ಇತರೆ ಅಭಿವೃದ್ಧಿಗಳಾದ ಕಛೇರಿ ಕಟ್ಟಡ ನಿರ್ಮಾಣ, ಶೌಚಾಲಯ ನಿರ್ಮಾಣ, ಬಸ್ ನಿಲ್ದಾಣ ಮತ್ತು ಮಾರುಕಟ್ಟೆ ಸಂಕೀರ್ಣ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಬಹುದಾಗಿದ್ದು, ಸದರಿ ಯೋಜನೆಯಡಿ ಶೇಕಡ 70 ರಷ್ಟು ಆರ್ಥಿಕ ಮತ್ತು ಭೌತಿಕ ಪ್ರಗತಿಯನ್ನು ಸಾಧಿಸಲಾಗಿರುತ್ತದೆ.

ಎಸ್.ಎಫ್.ಸಿ ಮುಕ್ತನಿಧಿಯ ಮಾರ್ಗಸೂಚಿಯನ್ವಯ ಕುಡಿಯುವ ನೀರು, ತರಕಾರಿ

# ಕರ್ನಾಟಕ ವಿಧಾನ ಸಭೆ

**ಮಾನ್ಯ ವಿಧಾನ ಸಭೆ ಸದಸ್ಯರು** : ಶ್ರೀ ಶ್ರೀನಿವಾಸ್ (ವಾಸು) ಎಸ್.ಆರ್

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **1036**

**ಉತ್ತರಿಸಬೇಕಾದ ದಿನಾಂಕ** : **05.02.2021**

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರ ಸಹಕಾರಿ ಸಂಘಗಳಿಂದ ರೈತರಿಗೆ ರಾಷ್ಟ್ರೀಯ ಬ್ಯಾಂಕುಗಳ ಮೂಲಕ ಎಷ್ಟೆಷ್ಟು ಸಾಲ ಮನ್ನಾ ಮಾಡಲಾಗಿದೆ: | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ರಾಜ್ಯ ಸರ್ಕಾರ 2018 ನೇ ಸಾಲಿನ ಸಾಲ ಮನ್ನಾ ಯೋಜನೆಯಲ್ಲಿ ಸಹಕಾರ ಸಂಘಗಳಿಂದ ರೈತರು ಬೆಳೆ ಸಾಲ ಪಡೆದು ದಿ:10.07.2018 ಕ್ಕೆ ಹೊರಬಾಕಿ ಹೊಂದಿರುವ ಬೆಳೆ ಸಾಲದಲ್ಲಿ ಕುಟುಂಬಕ್ಕೆ ರೂ.1.00 ಲಕ್ಷಗಳವರೆಗಿನ ಸಾಲ ಮನ್ನಾ ಮಾಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>2018-19ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದ ರೈತರಿಗೆ ಬೆಳೆ ಸಾಲ ಮನ್ನಾ ಮಾಡಲು ರೂಪಿಸಿದ ಯೋಜನೆಯನ್ವಯ ಶೆಡ್ಯೂಲ್ಡ್ ಕಮರ್ಶಿಯಲ್ ಮತ್ತು ಗ್ರಾಮೀಣ ಬ್ಯಾಂಕುಗಳಲ್ಲಿ ಬೆಳೆ ಸಾಲ ಮನ್ನಾ ಸೌಲಭ್ಯ ಪಡೆದ ರೈತರ ಸಂಖ್ಯೆ 9,22,673 ಹಾಗೂ ಮೊತ್ತ ರೂ.7,247.89 ಕೋಟಿಗಳಾಗಿದೆ. ಜಿಲ್ಲಾವಾರು ಮಾಹಿತಿ **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ) | ಸದರಿ ಯೋಜನೆಯಿಂದ ಈವರೆಗೂ ಪ್ರಯೋಜನ ಪಡೆದಿರುವ ಫಲಾನುಭವಿ ರೈತರೆಷ್ಟು; | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಸಹಕಾರ ಸಂಘಗಳ ಸಾಲ ಮನ್ನಾ ಯೋಜನೆಯಲ್ಲಿ 17,06,049 ರೈತರು ರೂ.7987.47 ಕೋಟಿಗಳ ಸಾಲ ಮನ್ನಾ ಮಾಡಲು ಅರ್ಹತೆ ಗುರುತಿಸಲಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-02** ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>2018-19ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದ ರೈತರಿಗೆ ಬೆಳೆ ಸಾಲ ಮನ್ನಾ ಮಾಡಲು ರೂಪಿಸಿದ ಯೋಜನೆಯನ್ವಯ ಶೆಡ್ಯೂಲ್ಡ್ ಕಮರ್ಶಿಯಲ್ ಮತ್ತು ಗ್ರಾಮೀಣ ಬ್ಯಾಂಕುಗಳಲ್ಲಿ ಬೆಳೆ |
| | | ಸಾಲ ಮನ್ನಾ ಸೌಲಭ್ಯ ಪಡೆದ ರೈತರ ಸಂಖ್ಯೆ 9,22,673 ಹಾಗೂ ಮೊತ್ತ ರೂ.7,247.89 ಕೋಟಿಗಳಾಗಿದೆ. ಜಿಲ್ಲಾವಾರು ಮಾಹಿತಿ **ಅನುಬಂಧ-1** ರಲ್ಲಿ ನೀಡಲಾಗಿದೆ. |

| ಇ) | ಫಲಾನುಭವಿ ರೈತರಿಗೆ ಯಾವ ಯಾವ ಬ್ಯಾಂಕುಗಳಿಂದ ಸಾಲ ಮನ್ನಾ ಮಾಡಿ ಹಣವನ್ನು ಜಮೆ ಮಾಡಲಾಗಿದೆ (ವಿವರ ನೀಡುವುದು)? | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಸಹಕಾರ ಸಂಘಗಳ ಸಾಲ ಮನ್ನಾ ಯೋಜನೆಯಲ್ಲಿ ಗುರುತಿಸಿದ ಅರ್ಹ ರೈತರ ಪೈಕಿ ಸಹಕಾರ ಬ್ಯಾಂಕುಗಳಲ್ಲಿನ 16,48,820 ರೈತ ಖಾತೆಗಳಿಗೆ ರೂ.7692.33 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಫಲಾನುಭವಿ ರೈತರಿಗೆ 37 ಬ್ಯಾಂಕ್‌ಗಳಿಂದ ಸಾಲ ಮನ್ನಾ ಮಾಡಿ ಹಣವನ್ನು ಜಮೆ ಮಾಡಲಾಗಿದೆ. ವಿವರವನ್ನು **ಅನುಬಂಧ-3**ರಲ್ಲಿ ನೀಡಲಾಗಿದೆ. |
|---|---|---|

**ಸಂಖ್ಯೆ: ಸಿಒ 25 ಸಿಎಲ್‌ಎಸ್ 2021**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1036 ಗೆ ಉತ್ತರ

ಅನುಬಂಧ - 1

| CLWS \|BANK \|CONSOLIDATED REPORT | | | |
|---|---|---|---|
| SLNO | DISTRICT | NO OF LOANEE | AMOUNT |
| 1 | BAGALKOTE | 7017 | 527,224,875.09 |
| 2 | BALLARY | 45997 | 3,968,379,157.38 |
| 3 | BANGALORE RURAL | 5451 | 509,687,777.21 |
| 4 | BANGALORE URBAN | 855 | 67,594,531.36 |
| 5 | BELAGAVI | 44635 | 3,455,758,665.42 |
| 6 | BIDAR | 15835 | 1,305,559,040.68 |
| 7 | BIJAPUR | 22863 | 2,021,505,168.99 |
| 8 | CHAMARAJANAGAR | 16704 | 1,643,489,181.97 |
| 9 | CHIKKABALLAPURA | 17992 | 1,875,704,196.81 |
| 10 | CHIKMAGALUR | 26803 | 2,115,603,880.31 |
| 11 | CHITRADURGA | 47367 | 3,750,736,156.57 |
| 12 | DAKSHINA KANNADA | 2743 | 149,778,092.20 |
| 13 | DAVANAGERE | 38277 | 2,999,678,637.65 |
| 14 | DHARWAD | 47223 | 3,878,003,150.57 |
| 15 | GADAG | 49440 | 4,081,877,086.93 |
| 16 | GULBARGA | 95523 | 6,348,544,220.00 |
| 17 | HASSAN | 42885 | 3,529,552,753.50 |
| 18 | HAVERI | 75199 | 5,733,125,151.64 |
| 19 | KODAGU | 4313 | 312,657,675.58 |
| 20 | KOLAR | 18480 | 1,984,784,844.40 |
| 21 | KOPPAL | 40555 | 2,928,991,402.57 |
| 22 | MANDYA | 18449 | 1,462,131,872.26 |
| 23 | MYSORE | 39830 | 3,209,316,504.72 |
| 24 | RAICHUR | 63236 | 4,800,345,728.37 |
| 25 | RAMANAGARA | 4009 | 397,245,372.23 |
| 26 | SHIMOGA | 32537 | 2,074,844,311.91 |
| 27 | TUMKUR | 43976 | 3,967,171,264.57 |
| 28 | UDUPI | 2289 | 109,370,583.55 |
| 29 | UTTARA KANNADA | 1375 | 59,424,384.13 |
| 30 | YADGIR | 50815 | 3,210,905,164.61 |
| | TOTAL | 922673 | 72,478,990,833.18 |

ವಿಶೇಷ ನೋಡಲ್ ಅಧಿಕಾರಿ

ಬೆಳೆ ಸಾಲ ಮನ್ನಾ ಯೋಜನೆ-2018

ಹಾಗೂ ಸರ್ಕಾರದ ಕಾರ್ಯದರ್ಶಿ (ಸಿ.ಆ.ಸು.ಇ) (ಎ&ಆರ್)

ಕರ್ನಾಟಕ ಸರ್ಕಾರ

ಸಂಖ್ಯೆ:ಆನಾಸ 44 ಡಿಆರ್ಎ 2021 (ಇ-ಆಫೀಸ್)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, ನೆಲಮಹಡಿ
ಬೆಂಗಳೂರು ದಿನಾಂಕ:04.02.2021.

83

4/S
05/02/2021

ಇವರಿಂದ,

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಂಜುನಾಥ ಹೆಚ್.ಪಿ. (ಹುಣಸೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1069ಗೆ ಉತ್ತರ ನೀಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ 1069/2021, ದಿನಾಂಕ:28.01.2021

******

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಂಜುನಾಥ ಹೆಚ್.ಪಿ. (ಹುಣಸೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1069ಗೆ ಉತ್ತರವನ್ನು ಸಿದ್ಧಪಡಿಸಿ, ಅದರ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

ಪ್ರತಿ:

1. ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯ... ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಸಹಾಯಕ, ವಿಕಾಸಸೌಧ, ಬೆಂಗಳ...

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1069

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಮಂಜುನಾಥ ಹೆಚ್.ಪಿ.(ಹುಣಸೂರು)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ವತಿಯಿಂದ ಪ್ರತಿ ನ್ಯಾಯ ಬೆಲೆ ಅಂಗಡಿಗಳಲ್ಲಿ E.K.Y.C ಯನ್ನು ಅಳವಡಿಸುವುದನ್ನು ಕಡ್ಡಾಯ ಮಾಡಲಾಗಿದೆಯೇ; (ಮಾಹಿತಿ ನೀಡುವುದು) | ಹೌದು. |
| ಆ | ಹಾಗಿದ್ದಲ್ಲಿ, E.K.Y.C ಯನ್ನು ಅಳವಡಿಸಲು ಸರ್ವರ್ ಸಮಸ್ಯೆ ಇರುವುದರಿಂದ ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರವನ್ನು ಸಕಾಲದಲ್ಲಿ ವಿತರಿಸಲು ಸಾಧ್ಯವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ವಿವರ ನೀಡುವುದು) | ಹೌದು.<br>ಪ್ರತಿ ತಿಂಗಳ 1 ರಿಂದ 10 ತಾರಿಖಿನವರೆಗೆ ಪಡಿತರ ಚೀಟಿದಾರರಿಂದ ಇ-ಕೆವೈಸಿ ಮಾಹಿತಿಯನ್ನು ಪಡೆದುಕೊಳ್ಳಲಾಗುತ್ತಿದೆ. 11 ರಿಂದ 30 ನೇ ತಾರಿಖಿನವರೆಗೆ ಪಡಿತರ ಫಲಾನುಭವಿಗಳಿಗೆ ಆಹಾರಧಾನ್ಯಗಳನ್ನು ವಿತರಿಸಲಾಗುತ್ತಿದೆ. |
| ಇ | ಬಂದಿದ್ದಲ್ಲಿ, ಈ ಸರ್ವರ್ ಸಮಸ್ಯೆಯನ್ನು ಸರಿಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಆಹಾರ ಇಲಾಖೆಯು ಸರ್ವರ್‌ಗಳನ್ನು ಎನ್.ಐ.ಸಿ ಸಂಸ್ಥೆಯಲ್ಲಿ ನಿರ್ವಹಿಸಲಾಗುತ್ತಿದ್ದು, ಆಹಾರ ಇಲಾಖೆಯ ಸರ್ವರ್ ಹಾಗೂ ಪಡಿತರ ಚೀಟಿಯ ದತ್ತಾಂಶವನ್ನು ರಾಜ್ಯ ದತ್ತಾಂಶ (KSDC) ಕೇಂದ್ರಕ್ಕೆ ವರ್ಗಾಯಿಸಲಾಗುತ್ತಿದೆ.<br>ಆಹಾರ ಇಲಾಖೆಯು ಹೊಂದಿರುವ ಸರ್ವರ್‌ಗಳ ಸಂಖ್ಯೆ ಹಾಗೂ ಸರ್ವರ್‌ಗಳ ಕ್ಷಮತೆಯನ್ನು ಹೆಚ್ಚಿಸಲು ಕ್ರಮವಹಿಸಲಾಗಿದೆ. |

ಆನಾಸ 44 ಡಿಆರ್‌ಎ 2021 (ಇ-ಆಫೀಸ್)

(ಉಮೇಶ.ವಿ.ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ: ಸಿಒ 09 ಪಿಎಂಸಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:03.02.2021

**ಇವರಿಂದ,**

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು – 560 001.

**ಇವರಿಗೆ,**

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1140 ಕ್ಕೆ ಉತ್ತರ ನೀಡುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1140 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

**ತಮ್ಮ ನಂಬುಗೆಯ,**

Radha H C

**(ಹೆಚ್.ಸಿ. ರಾಧ)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆಯ ಸದಸ್ಯರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1140

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆ, ಕುಶಾಲನಗರದ ಬಸವನಹಳ್ಳಿ ಲ್ಯಾಂಪ್ ಸೊಸೈಟಿಯಲ್ಲಿ ಹಣ ದುರುಪಯೋಗವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ದುರುಪಯೋಗ ಆಗಿರುವ ಹಣ ಎಷ್ಟು; ಸದರಿ ಹಣ ವಸೂಲಾತಿಗೆ ಸರ್ಕಾರ ತೆಗೆದುಕೊಂಡ ಕ್ರಮವೇನು; (ಪೂರ್ಣ ವಿವರ ನೀಡುವುದು) | ಹೌದು.<br><br>2018-19ನೇ ಸಾಲಿನ ಲೆಕ್ಕ ಪರಿಶೋಧನೆಯನ್ವಯ ರೂ.10,20,380-00 ಗಳು ಹಾಗೂ 2019-20ನೇ ಸಾಲಿನ ರೂ.13,66,475-00 ಗಳು ಒಟ್ಟು ರೂ.23,86,855-00 ಗಳು ಹಣ ದುರುಪಯೋಗವಾಗಿರುವುದು ಕಂಡು ಬಂದಿರುತ್ತದೆ.<br><br>ಹಣ ದುರುಪಯೋಗವಾಗಿರುವ ಮೊತ್ತವನ್ನು ಕಾನೂನು ರೀತ್ಯಾ ವಸೂಲಾತಿಗೆ ಕ್ರಮವಿಡುವಂತೆ ಸಹಕಾರ ಸಂಘದ ಆಡಳಿತ ಮಂಡಳಿಯವರಿಗೆ ಸಹಕಾರ ಸಂಘಗಳ ಉಪನಿಬಂಧಕರು, ಕೊಡಗು ಜಿಲ್ಲೆ, ಮಡಿಕೇರಿ ಇವರು ನಿರ್ದೇಶನ ನೀಡಿರುತ್ತಾರೆ. |
| ಆ) | ಬಸವನಹಳ್ಳಿ ಲ್ಯಾಂಪ್ ಸೊಸೈಟಿಗೆ ಲೆಕ್ಕವನ್ನು ಮರು ಪರಿಶೀಲನೆಗೆ ಒಳಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಲೆಕ್ಕಪರಿಶೋಧಕರು ಪರಿಶೀಲನೆ ನಡೆಸಲು ವಿಳಂಬ ನೀತಿ ಅನುಸರಿಸುತ್ತಿರುವುದಕ್ಕೆ ಸರ್ಕಾರದ ವತಿಯಿಂದ ಯಾವ ಕ್ರಮ ಕೈಗೊಳ್ಳಾಗಿದೆ; (ಪೂರ್ಣ ವಿವರ ನೀಡುವುದು) | ಲ್ಯಾಂಪ್ಸ್ ಸಹಕಾರ ಸಂಘದ ಲೆಕ್ಕವನ್ನು ಮರುಲೆಕ್ಕ ಪರಿಶೀಲನೆಗೆ ಒಳಪಡಿಸಿರುವುದಿಲ್ಲ.<br><br>2018-19 ಹಾಗೂ 2019-20ನೇ ಸಾಲಿನ ಸಾಮಾನ್ಯ ಲೆಕ್ಕಪರಿಶೋಧನೆಯಾಗಿದ್ದು, ಲೆಕ್ಕ ಪರಿಶೋಧನೆಯು ದಿನಾಂಕ:08.12.2020ರಂದು ಪೂರ್ಣಗೊಂಡಿದ್ದು, ದಿನಾಂಕ:10.12.2020 ರಂದು ವರದಿಯನ್ನು ಉಪ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಕೊಡಗು ಜಿಲ್ಲೆ ಇವರು ಬಿಡುಗಡೆಗೊಳಿಸಿರುತ್ತಾರೆ. |
| ಇ) | ಸರ್ಕಾರದ ಸಾಲ ಮನ್ನಾ ಯೋಜನೆಯಿಂದ ಸಹಕಾರ ಸಂಘಗಳಲ್ಲಿ ಕೆಲವು ರೈತರಿಗೆ ಸಾಲ ಮನ್ನಾ ಯೋಜನೆಯ ಸೌಲಭ್ಯ ಇನ್ನೂ ದೊರೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಯೋಜನೆಯಡಿ ಬಾಕಿ ಇರುವ ರೈತರ ಸಾಲವನ್ನು ಮನ್ನಾ ಮಾಡಲಾಗುತ್ತದೆಯೇ? ( ಪೂರ್ಣ ವಿವರ ನೀಡುವುದು) | ಹೌದು.<br><br>ಸಹಕಾರ ಸಂಘಗಳಲ್ಲಿ 2018-19ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆಯಡಿಯಲ್ಲಿ ಸಹಕಾರ ಸಂಘಗಳು ವಿವಿಧ ಕಾರಣಗಳಿಗೆ ರಿಜೆಕ್ಟ್ ಮಾಡಿದ ನಂತರ ತಂತ್ರಾಂಶದಲ್ಲಿ 1768105 ರೈತರ ಮಾಹಿತಿಯನ್ನು ಅಳವಡಿಸಿರುತ್ತಾರೆ. ಇದರಲ್ಲಿ 1706049 ರೈತರು ರೂ.7987.47 ಕೋಟಿಗಳ ಸಾಲ ಮನ್ನಾ ಮಾಡಲು ಅರ್ಹತೆ ಗುರುತಿಸಲಾಗಿದ್ದು, ಈ ಪೈಕಿ 1648820 ರೈತರಿಗೆ ಸಂಬಂಧಿಸಿದಂತೆ ರೂ.7692.33 |

| | | |
|---|---|---|
| | | ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಜಿಲ್ಲಾವಾರು ವಿವರವನ್ನು '**ಅನುಬಂಧ**' ದಲ್ಲಿ ನೀಡಲಾಗಿದೆ. 62056 ರೈತರ ಅರ್ಹತೆ ಗುರುತಿಸಿ ಸಾಲ ಮನ್ನಾ ಮಾಡಲು ಬಾಕಿ ಇರುತ್ತದೆ.<br><br>ಅರ್ಹತೆ ಗುರುತಿಸಲು ಬಾಕಿ ಇರುವ 62056 ರೈತರ ಪೈಕಿ, 13020 ರೈತರ ಸಾಲದ ಮತ್ತು ವೈಯಕ್ತಿಕ ಮಾಹಿತಿಯನ್ನು ಸಹಕಾರ ಸಂಘಗಳು ಸಾಲ ಮನ್ನಾ ತಂತ್ರಾಂಶದಲ್ಲಿ ತಪ್ಪಾಗಿ ಅಳವಡಿಸಿದ್ದು, ಈ ಮಾಹಿತಿಯನ್ನು ಸಂಬಂಧಿಸಿದ ಸಹಕಾರ ಸಂಘಗಳು ಸರಿಪಡಿಸಲು ತಂತ್ರಾಂಶದಲ್ಲಿ ಅವಕಾಶ ಕಲ್ಪಿಸಲು ಕ್ರಮವಹಿಸಲಾಗಿದೆ.<br><br>ಉಳಿದ 49036 ರೈತರ ಆಧಾರ್, ರೇಷನ್ ಕಾರ್ಡ್ ಮತ್ತು ಆರ್‌ಟಿಸಿ ದಾಖಲೆಗಳು ಸಂಬಂಧಪಟ್ಟ ಇಲಾಖೆಗಳ ತಂತ್ರಾಂಶದೊಂದಿಗೆ ಮತ್ತು ಈ ರೈತರು ಪಡೆದ ಸಾಲದ ಮಾಹಿತಿ ಸಂಘಗಳ ದಾಖಲೆಗಳೊಂದಿಗೆ ತಾಳೆಯಾಗದೇ ಇದ್ದು, ಇವುಗಳನ್ನು ಪರಿಶೀಲಿಸಲಾಗುತ್ತಿದ್ದು, ನಂತರ ಅರ್ಹ ರೈತರ ಖಾತೆಗಳಿಗೆ ಬಿಡುಗಡೆ ಮಾಡಲಾಗುವುದು. |

**ಕಡತ ಸಂಖ್ಯೆ: ಸಿಒ 09 ಪಿಎಂಸಿ 2021**

ಎಸ್.ಟಿ. ಸೋಮಶೇಖರ್

**(ಎಸ್. ಟಿ. ಸೋಮಶೇಖರ್)**
**ಸಹಕಾರ ಸಚಿವರು.**

ಕರ್ನಾಟಕ ಸರ್ಕಾರ

ಸಂಖ್ಯೆ:ಆನಾಸ 52 ಡಿಆರ್‌ಎ 2021 (ಇ-ಆಫೀಸ್)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, ನೆಲಮಹಡಿ
ಬೆಂಗಳೂರು ದಿನಾಂಕ:04.02.2021.

114 U/S
05/02/2021

ಇವರಿಂದ,

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1190 ಗೆ ಉತ್ತರ ನೀಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ 1190/2021, ದಿನಾಂಕ:28.01.2021

******

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1190 ಗೆ ಉತ್ತರವನ್ನು ಸಿದ್ಧಪಡಿಸಿ, ಅದರ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಪಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

**ಪ್ರತಿ:**

1. ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಸಹಾಯಕ, ವಿಕಾಸಸೌಧ, ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1190 |
| ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) |
| ಉತ್ತರಿಸಬೇಕಾದ ದಿನಾಂಕ | : | 05.02.2021 |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೇಂದ್ರ ಸರ್ಕಾರದ ಬಹುನಿರೀಕ್ಷಿತ ಮತ್ತು ಮಹತ್ವಾಕಾಂಕ್ಷಿಯ ಯೋಜನೆ ಒನ್ ನೇಷನ್, ಒನ್ ರೇಷನ್ ಕಾರ್ಡ್ ಯೋಜನೆ ರಾಜ್ಯದಲ್ಲಿ ಜಾರಿಯಾಗಿದೆಯೇ; ಈ ಯೋಜನೆಯ ಉದ್ದೇಶಗಳೇನು; ಅನುಕೂಲಗಳೇನು;(ವಿವರ ನೀಡುವುದು) | ಒನ್ ನೇಷನ್, ಒನ್ ರೇಷನ್ ಕಾರ್ಡ್ ಯೋಜನೆಯನ್ನು ರಾಜ್ಯದಲ್ಲಿ ಜಾರಿಗೊಳಿಸಲಾಗಿದೆ. ಈ ಯೋಜನೆಯ ಅನುಸಾರ ರಾಷ್ಟ್ರದ ಯಾವುದೇ ರಾಜ್ಯದಲ್ಲಿನ ಪಡಿತರ ಚೀಟಿದಾರರು ನಮ್ಮ ರಾಜ್ಯದಲ್ಲಿ ಪಡಿತರ ಪಡೆಯಬಹುದು. ಅಥವಾ ನಮ್ಮ ರಾಜ್ಯದ ಪಡಿತರ ಚೀಟಿದಾರರು ಒನ್ ನೇಷನ್, ಒನ್ ರೇಷನ್ ಕಾರ್ಡ್ ಯೋಜನೆಯನ್ನು ಅಳವಡಿಸಿಕೊಂಡಿರುವ ರಾಷ್ಟ್ರದ ಇತರೆ ರಾಜ್ಯಗಳಲ್ಲಿ ಪಡಿತರ ಪಡೆಯಬಹುದಾಗಿರುತ್ತದೆ. ಹಾಗೂ ರಾಜ್ಯದಲ್ಲಿನ ಪಡಿತರ ಚೀಟಿದಾರರು ರಾಜ್ಯದ ಯಾವುದೇ ನ್ಯಾಯಬೆಲೆ ಅಂಗಡಿಯಲ್ಲಿ ಪಡಿತರ ಪಡೆಯಬಹುದು. ಅದರಂತೆ ಹೊರ ರಾಜ್ಯದ ಪಡಿತರ ಚೀಟಿದಾರರು ಕರ್ನಾಟಕದ ವಿವಿಧ ಭಾಗದ ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರ ಪಡೆಯುವ ಪೋರ್ಟಬಿಲಿಟಿ ಯೋಜನೆಯನ್ನು ಜಾರಿಗೊಳಿಸಲಾಗಿದೆ. |
| ಆ | ಈ ಯೋಜನೆಯ ವ್ಯಾಪ್ತಿಯಲ್ಲಿ ರಾಜ್ಯದ ಎಷ್ಟು ಜನರಿಗೆ ಉಚಿತ ಪಡಿತರ ದೊರಕಲಿದೆ? (ವಿವರ ನೀಡುವುದು) | ಅನ್ನಭಾಗ್ಯ ಯೋಜನೆಯಡಿ ರಾಜ್ಯದಲ್ಲಿರುವ 1,17,00,391 ಆದ್ಯತಾ ಪಡಿತರ ಚೀಟಿಯ 3,90,56,550 ಮತ್ತು 10,92,292 ಅಂತ್ಯೋದಯ ಪಡಿತರ ಚೀಟಿಯ 46,45,263 ಪಡಿತರ ಫಲಾನುಭವಿಗಳಿಗೆ ಉಚಿತವಾಗಿ ಪಡಿತರವನ್ನು ವಿತರಿಸಲಾಗುತ್ತಿದೆ. |

ಆನಾಸ 52 ಡಿಆರ್‌ಎ 2021 (ಇ-ಆಫೀಸ್)

(ಉಮೇಶ್.ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ:ಆನಾಸ 38 ಡಿಆರ್‌ಎ 2021 (ಇ-ಆಫೀಸ್)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, ನೆಲಮಹಡಿ
ಬೆಂಗಳೂರು ದಿನಾಂಕ:04.02.2021.

ಇವರಿಂದ,

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಕುಮಾರ್ ಬಂಗಾರಪ್ಪ ಎಸ್ (ಸೊರಬ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1047ಗೆ ಉತ್ತರ ನೀಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ 1047/2021, ದಿನಾಂಕ:28.01.2021

******

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಕುಮಾರ್ ಬಂಗಾರಪ್ಪ ಎಸ್ (ಸೊರಬ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1047 ಗೆ ಉತ್ತರವನ್ನು ಸಿದ್ಧಪಡಿಸಿ, ಅದರ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

( ವಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

**ಪ್ರತಿ:**

1. ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಸಹಾಯಕ, ವಿಕಾಸಸೌಧ, ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1047

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಕುಮಾರ್ ಬಂಗಾರಪ್ಪ ಎಸ್ (ಸೊರಬ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಗ್ರಾಮೀಣ ಮತ್ತು ನಗರ ವ್ಯಾಪ್ತಿಯಲ್ಲಿ ಪಡಿತರ ವ್ಯವಸ್ಥೆಯಲ್ಲಿ ಅವಲಂಬಿಸಿರುವ ಬಡವರಿಗೆ ಸರ್ಕಾರದ ಮಾರ್ಗಸೂಚಿಯಂತೆ ಪಡಿತರ ದೊರೆಯಲು ಆಹಾರ ಸುರಕ್ಷಾ ಸಮಿತಿಯ ಸಭೆಗಳು ನಡೆಯುವುದು ಅತಿ ಮುಖ್ಯ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆಯನ್ವಯ ನ್ಯಾಯಬೆಲೆ ಅಂಗಡಿಗಳ ಹಂತದಲ್ಲಿ ಆಹಾರ ಜಾಗೃತಿ ಸಮಿತಿಗಳನ್ನು ರಚಿಸಲಾಗಿದೆ. |
| ಆ | ಬಂದಿದ್ದಲ್ಲಿ, ಕಡ್ಡಾಯವಾಗಿ ಆಹಾರ ಸುರಕ್ಷಾ ಸಮಿತಿಯ ಸಭೆಗಳನ್ನು ನಡೆಸಲು ಸುರಕ್ಷಾ ಸಮಿತಿಯನ್ನು ಸಂಬಂಧಪಟ್ಟ ಗ್ರಾಮದಲ್ಲಿ ಸಾರ್ವಜನಿಕವಾಗಿ ಪ್ರಕಟಿಸಲು ಹಾಗೂ ಪ್ರತಿ ತಿಂಗಳು ಸರಬರಾಜಾದ ಆಹಾರ ಪಡಿತರವನ್ನು ನೋಟಿಸ್ ಬೋರ್ಡ್‌ನಲ್ಲಿ ಪ್ರಕಟಿಸಲು ಸರ್ಕಾರದ ಯಾವ ರೀತಿ ಕ್ರಮ ಜರುಗಿಸಿದೆ ? (ವಿವರ ನೀಡುವುದು) | ನ್ಯಾಯಬೆಲೆ ಅಂಗಡಿಗಳ ಮುಂದೆ ಜಾಗೃತಿ ಸಮಿತಿಯ ಸದಸ್ಯರುಗಳ ವಿವರಗಳನ್ನು ಪ್ರಕಟಿಸಿ ಪ್ರತಿ ತಿಂಗಳ 7 ನೇ ತಾರೀಖಿನಂದು ಜಾಗೃತಿ ಸಮಿತಿಯ ಸಭೆಯನ್ನು ನಡೆಸಲಾಗುತ್ತಿದೆ. ನ್ಯಾಯಬೆಲೆ ಅಂಗಡಿಗೆ ಸರಬರಾಜಾಗುವ ಆಹಾರಧಾನ್ಯಗಳ ದಾಸ್ತಾನು ಹಾಗೂ ಲಭ್ಯವಿರುವ ದಾಸ್ತಾನಿನ ಮಾಹಿತಿಯನ್ನು ಸೂಚನಾ ಫಲಕದಲ್ಲಿ ಪ್ರಕಟಿಸಲಾಗುತ್ತಿದೆ. |

ಆನಾಸ 38 ಡಿಆರ್‌ಎ 2021 (ಇ-ಆಫೀಸ್)

(ಉಮೇಶ.ವಿ.ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

## ಕರ್ನಾಟಕ ಸರ್ಕಾರ

ಸಂಖ್ಯೆ: HORTI 55 HGM 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 04-02-2021

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಇವರಿಗೆ:
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ :ಶ್ರೀ ಖಾದರ್ ಯು.ಟಿ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1152ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಖಾದರ್ ಯು.ಟಿ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:1152ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

T.V. Sunandamma 04/02/21
(ಟಿ.ವಿ.ಸುನಂದಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ : 1152**

**ಸದಸ್ಯರ ಹೆಸರು : ಶ್ರೀ. ಖಾದರ್ ಯು.ಟಿ.(ಮಂಗಳೂರು)**

**ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**

**ಉತ್ತರಿಸಬೇಕಾದ ದಿನಾಂಕ : 05.02.2021**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತೋಟಗಾರಿಕೆ ಇಲಾಖೆಯಿಂದ ರಾಜ್ಯದ ಜನರ ಕಲ್ಯಾಣಕ್ಕಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳಾವುವು; (ಯೋಜನಾವಾರು ವಿವರಗಳನ್ನು ಒದಗಿಸುವುದು) | ಪ್ರಸಕ್ತ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯಿಂದ ರಾಜ್ಯದ ಜನರ ಕಲ್ಯಾಣಕ್ಕಾಗಿ ಹಮ್ಮಿಕೊಂಡಿರುವ ಯೋಜನೆಗಳು ಹಾಗೂ ಕಾರ್ಯಕ್ರಮಗಳ ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| ಆ) | ಕಳೆದ ಎರಡು ವರ್ಷಗಳಿಂದ ವಿವಿಧ ಯೋಜನೆಗಳಡಿಯಲ್ಲಿ ಖರ್ಚು ಮಾಡಿರುವ ಹಣವೆಷ್ಟು; (ಜಿಲ್ಲಾವಾರು ವಿವರಗಳನ್ನು ಒದಗಿಸುವುದು) | ಕಳೆದ ಎರಡು ವರ್ಷಗಳಲ್ಲಿ ಅಂದರೆ 2018-19 ಹಾಗೂ 2019-20ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಒಟ್ಟಾರೆ ಅನುಕ್ರಮವಾಗಿ ರೂ.109603.28 ಲಕ್ಷಗಳು ಹಾಗೂ ರೂ. 84905.83 ಲಕ್ಷಗಳ ಅನುದಾನವನ್ನು ಖರ್ಚು ಮಾಡಲಾಗಿರುತ್ತದೆ. ಯೋಜನಾವಾರು ಮತ್ತು ಜಿಲ್ಲಾವಾರು ವಿವರವನ್ನು ಅನುಬಂಧ-2a & 2b ರಲ್ಲಿ ಒದಗಿಸಲಾಗಿದೆ. |

ಸಂಖ್ಯೆ: HORTI 63 HGM 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಅನುಬಂಧ-1

LAQ - 1152

# ರಾಜ್ಯದ ಜನರ ಕಲ್ಯಾಣಕ್ಕಾಗಿ ಇಲಾಖೆಯಿಂದ ಹಮ್ಮಿಕೊಂಡಿರುವ ಯೋಜನೆಗಳು ಹಾಗೂ ಕಾರ್ಯಕ್ರಮಗಳ ವಿವರ

| ಕ್ರ. ಸಂ. | ಯೋಜನೆವಾರು ಕಾರ್ಯಕ್ರಮಗಳ ವಿವರ |
|---|---|
| I | **ಕೇಂದ್ರವಲಯ ಯೋಜನೆಗಳು** |
| 1 | **ಸಾಮಾರ್ಥ್ಯವುಳ್ಳ ರಾಜ್ಯಗಳಲ್ಲಿ ಎಣ್ಣೆ ತಾಳೆ ವ್ಯವಸಾಯ ಯೋಜನೆ** |
| a | ಹೊಸ ಪ್ರದೇಶ ವಿಸ್ತರಣೆ ಮತ್ತು ನಿರ್ವಹಣೆ |
| b | ಎತ್ತರವಾದ ತಾಳೆ ಮರಗಳಿಂದ ತಾಳೆ ಹಣ್ಣುಗಳನ್ನು ಕಟಾವು ಮಾಡಲು ಸಹಾಯಧನ |
| c | ತಾಳೆಹಣ್ಣುಗಳ ಸಾಗಾಣಿಕೆ ಸಹಾಯಧನ |
| d | ಡೀಸೆಲ್ ಪಂಪ್ ಸೆಟ್ ಕೊಳ್ಳಲು ಸಹಾಯಧನ |
| e | ಕೊಳವೆ ಬಾವಿಗೆ ಸಹಾಯಧನ |
| f | ಅಂತರ ಬೆಳೆಗೆ ಸಹಾಯಧನ |
| g | ಕಟಾವು ಉಪಕರಣಕ್ಕೆ ಸಹಾಯಧನ |
| h | ಮೋಟೊರೈಸ್ಡ್ ಚಿಸೆಲ್ |
| i | ತಾಳೆ ರೈತರಿಗೆ ತರಬೇತಿ |
| 2 | **ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ** |
| a | ಸೂಕ್ಷ್ಮ ನೀರಾವರಿ ಪ್ರದೇಶ ವಿಸ್ತರಣೆ |
| 3 | ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗಾಗಿ ತೆಂಗಿನಲ್ಲಿ ಸಂಯೋಜಿತ ಬೇಸಾಯ. |
| a | ಹೊಸ ಪ್ರಾತ್ಯಕ್ಷಿತೆ ತಾಕುಗಳ ನಿರ್ಮಾಣ ಮತ್ತು ನಿರ್ವಹಣೆ |
| b | ಮರುನಾಟಿ ಮತ್ತು ಪುನಶ್ಚೇತನ ಕಾರ್ಯಕ್ರಮ ಮತ್ತು ನಿರ್ವಹಣೆ |
| c | ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಕಾರ್ಯಕ್ರಮ |
| d | ಸಮಗ್ರ ಪೋಷಕಾಂಶ ನಿರ್ವಹಣೆ |
| e | ತೆಂಗಿನ ತೋಟಗಳ ಪ್ರದೇಶ ವಿಸ್ತರಣೆ |
| f | ನೀರಾ ಸಂಸ್ಕರಣಾ ಘಟಕಗಳ ಸ್ಥಾಪನೆ |
| g | TxD/DxT ಹೈಬ್ರೀಡ್ ತೆಂಗಿನ ಸಸಿಗಳ ಉತ್ಪಾದನೆ |

LAW-1152

ಅನುಬಂಧ-1

# ರಾಜ್ಯದ ಜನರ ಕಲ್ಯಾಣಕ್ಕಾಗಿ ಇಲಾಖೆಯಿಂದ ಹಮ್ಮಿಕೊಂಡಿರುವ ಯೋಜನೆಗಳು ಹಾಗೂ ಕಾರ್ಯಕ್ರಮಗಳ ವಿವರ

| ಕ್ರ. ಸಂ. | ಯೋಜನೆವಾರು ಕಾರ್ಯಕ್ರಮಗಳ ವಿವರ |
|---|---|
| **4** | **ರಾಷ್ಟ್ರೀಯ ತೋಟಗಾರಿಕೆ ಮಿಷನ್** |
| a | ಸಸ್ಯಾಭಿವೃದ್ಧಿ |
| b | ಹೊಸ ಪ್ರದೇಶ ವಿಸ್ತರಣೆ ಮತ್ತು ನಿರ್ವಹಣೆ |
| c | ಪುನಃಶ್ಚೇತನ |
| d | ಸಮಗ್ರ ಪೋಷಕಾಂಶ ಮತ್ತು ರೋಗ/ಕೀಟ ನಿರ್ವಹಣೆ |
| e | ಸಾವಯವ ಕೃಷಿ |
| f | ಕೊಯ್ಲೋತ್ತರ ನಿರ್ವಹಣಾ ಘಟಕ |
| g | ಮಾರುಕಟ್ಟೆ |
| h | ನೀರು ಸಂಗ್ರಹಣಾ ಘಟಕ |
| i | ಸಂರಕ್ಷಿತ ಬೇಸಾಯ ಕಾರ್ಯಕ್ರಮ |
| j | ಯಾಂತ್ರೀಕರಣ |
| k | ಜೇನು ಕೃಷಿ |
| l | ಮಾನವ ಸಂಪನ್ಮೂಲ ಅಭಿವೃದ್ಧಿ |
| m | ಅಣಬೆ ಬೇಸಾಯ |
| **II** | **ರಾಜ್ಯವಲಯ ಯೋಜನೆಗಳು** |
| **1** | **ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ** |
| a. | 8 BHP & above ಪವರ್ ಟಿಲ್ಲರ್ ಗೆ ಸಹಾಯಧನ |
| **2** | **ಸಮಗ್ರ ತೋಟಗಾರಿಕಾ ಅಭಿವೃದ್ಧಿ** |
| a | ಹೂವಿನ ಬೆಳೆಗಾರರಿಗೆ ಪರಿಹಾರಧನ |
| b | ಹಣ್ಣು ಮತ್ತು ತರಕಾರಿ ಬೆಳೆಗಾರರಿಗೆ ಪರಿಹಾರಧನ |
| **3** | **ಕೃಷಿ ಕ್ಷೇತ್ರ ಮತ್ತು ಸಸ್ಯವಾಟಿಕೆಗಳ ಅಭಿವೃದ್ಧಿ ಮತ್ತು ನಿರ್ವಹಣೆ** |
| a | ಮಾದರಿ ತೋಟಗಾರಿಕೆ ಕ್ಷೇತ್ರಗಳ ಅಭಿವೃದ್ಧಿ ಮತ್ತು ನಿರ್ವಹಣೆ ಹಾಗೂ ಇತರೆ ಕ್ಷೇತ್ರಗಳ ಸಮಗ್ರ ನಿರ್ವಹಣೆ |

ಅನುಬಂಧ-1 LAQ-1152

## ರಾಜ್ಯದ ಜನರ ಕಲ್ಯಾಣಕ್ಕಾಗಿ ಇಲಾಖೆಯಿಂದ ಹಮ್ಮಿಕೊಂಡಿರುವ ಯೋಜನೆಗಳು ಹಾಗೂ ಕಾರ್ಯಕ್ರಮಗಳ ವಿವರ

| ಕ್ರ. ಸಂ. | ಯೋಜನೆವಾರು ಕಾರ್ಯಕ್ರಮಗಳ ವಿವರ |
|---|---|
| 4 | **ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ** |
| a | ಅಂಗಾಂಶ ಕೃಷಿ ಸಸ್ಯಾಭಿವೃದ್ಧಿ |
| b | ಮಣ್ಣು, ನೀರು, ಎಲೆ ಮಾದರಿಗಳ ವಿಶ್ಲೇಷಣೆ |
| c | ಅಣಬೆ ಸ್ಪಾನ್ ಉತ್ಪಾದನೆ |
| d | ಜೈವಿಕ ಗೊಬ್ಬರ, ಜೈವಿಕ ನಿಯಂತ್ರಕಗಳು ಮತ್ತು ಎರೆಹುಳು ಗೊಬ್ಬರ ಉತ್ಪಾದನೆ |
| e | ಅಣಬೆ ಬೆಳೆ |
| f | ಅಣಬೆ ಸ್ಪಾನ್ ರನ್ ಬ್ಯಾಗ್ |
| g | ತರಕಾರಿ ಬೀಜ ಮಾದಿರಯ ಸಂಗ್ರಹಣೆ ಮತ್ತು ವಿಶ್ಲೇಷಣೆ |
| h | ಕೌಶಲ್ಯ ತರಬೇತಿ |
| i | ಚಿಂತನ ಮಂಥನ ಮತ್ತು ಅಣಬೆ ಮೇಳ ಕಾರ್ಯಕ್ರಮ |
| 5 | **ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗ ಸಮಗ್ರ ನಿಯಂತ್ರಣ ಯೋಜನೆ** |
| a | ಗೊನಿಯೋಜಸ್ ಮತ್ತು ಬ್ರಾಕಿಮೀರಿಯಾ ಪರೋಪಜೀವಿಗಳ ಉತ್ಪಾದನೆ (ಲಕ್ಷ ಸಂಖ್ಯೆ) |
| b | ಸಸ್ಯ ಸಂರಕ್ಷಣೆ ಔಷಧಿಗಳ ವಿತರಣೆ |
| 6 | **ಮಧುವನ ಮತ್ತು ಜೇನು ಸಾಕಾಣಿಕೆ ಅಭಿವೃದ್ಧಿ** |
| a | ತರಬೇತಿ ಕಾರ್ಯಕ್ರಮಗಳು. |
| b | ಜೇನು ಪೆಟ್ಟಿಗೆ, ಜೇನು ಕುಟುಂಬ ಹಾಗೂ ಸ್ಟ್ಯಾಂಡ್ ಖರೀದಿಗೆ ಸಹಾಯಧನ. |
| c | ಖಾಸಗಿ ಮಧುವನಗಳ ಸ್ಥಾಪನೆಗೆ ಸಹಾಯ. |
| d | ಜೇನು ಸಂಸ್ಕರಣಾ ಘಟಕ ಸ್ಥಾಪನೆಗೆ ಸಹಾಯಧನ |
| e | ಇಲಾಖಾ ಮಧುವನಗಳು / ಜೇನುಗಾರಿಕೆ ತರಬೇತಿ ಕೇಂದ್ರ ಗಳ ಅಭಿವೃದ್ಧಿ ಹಾಗೂ ನಿರ್ವಹಣೆ. |
| f | ಪ್ರಚಾರ/ಸಾಹಿತ್ಯ/ಶೈಕ್ಷಣಿಕ/ಅಧ್ಯಯನ ಪ್ರವಾಸ ಹಾಗೂ ಉತ್ತೇಜನ ಚಟುವಟಿಕೆಗಳು. |
| III | **ಜಿಲ್ಲಾ ವಲಯ ಯೋಜನೆಗಳು** |
| 1 | **ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ** |
| a | ಪ್ರದೇಶ ವಿಸ್ತರಣೆ |

LAQ-1152

ಅನುಬಂಧ-1

# ರಾಜ್ಯದ ಜನರ ಕಲ್ಯಾಣಕ್ಕಾಗಿ ಇಲಾಖೆಯಿಂದ ಹಮ್ಮಿಕೊಂಡಿರುವ ಯೋಜನೆಗಳು ಹಾಗೂ ಕಾರ್ಯಕ್ರಮಗಳ ವಿವರ

| ಕ್ರ. ಸಂ. | ಯೋಜನೆವಾರು ಕಾರ್ಯಕ್ರಮಗಳ ವಿವರ |
|---|---|
| 2 | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ |
| a | ತೆಂಗು ಬೀಜ ಸಂಗ್ರಹಣೆ, ಬಿತ್ತನೆ ಮತ್ತು ಪಾಲನೆ (ಸಂ.) |
| b | ಪರೋಪ ಜೀವಿಗಳ ಉತ್ಪಾದನೆ (ಲಕ್ಷ. ಸಂಖ್ಯೆಗಳಲ್ಲಿ) |
| 3 | ತೋಟಗಾರಿಕೆ ಕ್ಷೇತ್ರಗಳ ನಿರ್ವಹಣೆ, |
| 4 | ಪ್ರಚಾರ ಮತ್ತು ಸಾಹಿತ್ಯ, |
| 5 | ಶೀಥಲ ಗೃಹಗಳಿಗೆ ಸಹಾಯ ಧನ ಯೋಜನೆ |
| 6 | ಜೇನು ಸಾಕಾಣಿಕೆ |
| a | ತರಬೇತಿ ಕಾರ್ಯಕ್ರಮಗಳು.(ಸಂಖ್ಯೆಗಳಲ್ಲಿ) |
| b | ಜೇನು ಪೆಟ್ಟಿಗೆ, ಜೇನು ಕುಟುಂಬ ಹಾಗೂ ಸ್ಟ್ಯಾಂಡ್ ಖರೀದಿಗೆ ಸಹಾಯಧನ. (ಸಂಖ್ಯೆಗಳಲ್ಲಿ) |
| c | ಸೇವಾ ಸರಬರಾಜುದಾರರಿಗೆ ಗೌರವ ಧನ |
| d | ಮಧುವನಗಳು/ತರಬೇತಿ ಕೇಂದ್ರಗಳ ಅಭಿವೃದ್ಧಿ/ಅಧ್ಯಯನ ಪ್ರವಾಸ |
| 7 | ರೈತರಿಗೆ ತರಬೇತಿ |

ತೋಟಗಾರಿಕೆ ಜಂಟಿ ನಿರ್ದೇಶಕರು
(ಯೋಜನೆ)

(4)

ಅನುಬಂಧ-2a

LAQ-1152,

## 2018-19ನೇ ಸಾಲಿನಲ್ಲಿ, ವಿವಿಧ ಯೋಜನೆಗಳಡಿಯಲ್ಲಿ, ಜಿಲ್ಲಾವಾರು ವೆಚ್ಚಮಾಡಲಾಗಿರುವ ವಿವರ (ರೂ.ಲಕ್ಷಗಳಲ್ಲಿ)

| ಕ್ರ. ಸಂ | ಜಿಲ್ಲೆಗಳು | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ) | ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗೆ ತೆಂಗಿನಲ್ಲಿ ಸಂಯೋಜಿತ ಬೇಸಾಯ | ರಾಷ್ಟ್ರೀಯ ತೋಟಗಾರಿಕೆ ಮಿಷನ್ | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ | ತೋಟಗಾರಿಕೆ ನಿಗಮ ಮತ್ತು ಮಂಡಳಿಗಳಿಗೆ ಸಹಾಯಧನ | ಸಮಗ್ರ ತೋಟಗಾರಿಕಾ ಅಭಿವೃದ್ಧಿ | ಕೃಷಿ ಕ್ಷೇತ್ರ ಮತ್ತು ಸಸ್ಯಪಾಟಿಕೆಗಳ ಅಭಿವೃದ್ಧಿ ಮತ್ತು ನಿರ್ವಹಣೆ | ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ | ತೋಟಗಾರಿಕೆ ಕಟ್ಟಡಗಳು | ಕೃಷಿ ಭಾಗ್ಯ (ತೋಟಗಾರಿಕೆ) | S-15 ಕರ್ನಾಟಕ ಜಲಾನಯನ ಅಭಿವೃದ್ಧಿ ಯೋಜನೆ -II (ಸುಜಲಾ-III) - ಇಎಪಿ | S-16 ತೋಟಗಾರಿಕೆ ಉದ್ಯಾನವನಗಳು ಮತ್ತು ತೋಟಗಳು |
|---|---|---|---|---|---|---|---|---|---|---|---|---|---|---|---|---|
| 1 | ಬೆಂಗಳೂರು (ನ) | | 398.58 | 2.24 | 1048.92 | 1.70 | 500.00 | 194.60 | 24.50 | 0.55 | 11.69 | | 657.76 | 444.79 | 1317.70 |
| 2 | ಬೆಂಗಳೂರು (ಗ್ರಾ) | | 754.97 | 15.69 | 543.13 | 4.53 | | 418.58 | 19.13 | 0.55 | 46.44 | | 855.12 | | 54.96 |
| 3 | ಬಾಗಲಕೋಟೆ | 20.74 | 1320.33 | | 500.69 | 3.75 | | 716.30 | 9.95 | 0.60 | 11.00 | | 89.27 | | 1.00 |
| 4 | ಬೆಳಗಾವಿ | 45.14 | 1710.31 | 3.22 | 806.66 | 7.12 | | 796.75 | 99.00 | 85.58 | 55.50 | 35.00 | 282.98 | | 30.00 |
| 5 | ಬಳ್ಳಾರಿ | 51.26 | 1328.23 | 27.67 | 674.72 | 21.62 | | 378.79 | 39.73 | 0.60 | 58.50 | | 154.44 | | |
| 6 | ಬೀದರ್ | 1.23 | 503.65 | | 255.64 | 6.17 | | 280.42 | 121.75 | 42.63 | 15.40 | | 107.03 | 105.89 | 0.99 |
| 7 | ವಿಜಯಪುರ | 21.19 | 1912.21 | | 2017.19 | 7.77 | 100.00 | 2001.39 | 25.50 | 3.00 | 40.50 | | 327.48 | 349.16 | 101.00 |
| 8 | ಚಾಮರಾಜನಗರ | 19.27 | 1164.32 | 1872.75 | 267.35 | 6.32 | | 249.09 | 32.99 | 0.58 | 26.76 | | 136.58 | 327.39 | |
| 9 | ಚಿಕ್ಕಬಳ್ಳಾಪುರ | | 1346.13 | 2.12 | 690.44 | 17.80 | | 398.74 | 20.06 | 40.61 | 55.35 | | 846.67 | | 223.64 |
| 10 | ಚಿಕ್ಕಮಗಳೂರು | 23.00 | 589.44 | 1755.36 | 733.44 | 11.63 | | 571.24 | 21.35 | 0.59 | 85.46 | | 155.30 | 36.19 | 135.00 |
| 11 | ಚಿತ್ರದುರ್ಗ | | 1670.57 | 1431.19 | 630.74 | 16.63 | | 430.81 | 21.96 | 0.59 | 114.35 | | 223.72 | | |
| 12 | ದಕ್ಷಿಣಕನ್ನಡ | 6.06 | 91.73 | 65.36 | 152.86 | 3.49 | | 205.84 | 34.68 | | 61.50 | | 10.00 | | 20.00 |
| 13 | ದಾವಣಗೆರೆ | 70.43 | 2335.47 | 272.61 | 1074.36 | 13.05 | | 858.61 | 41.69 | 3.55 | 104.76 | | 275.26 | 427.43 | 60.00 |
| 14 | ಧಾರವಾಡ | 6.71 | 237.62 | | 492.62 | 6.90 | 200.00 | 351.77 | 20.00 | 0.60 | 21.06 | | 163.78 | | 20.00 |
| 15 | ಗದಗ | 5.13 | 897.09 | | 394.43 | 10.14 | | 431.01 | 28.20 | 0.60 | 19.50 | | 271.96 | 88.34 | 1.00 |
| 16 | ಕಲಬುರಗಿ | | 1758.94 | | 533.53 | 15.54 | | 443.68 | 21.08 | 0.60 | 33.87 | 55.00 | 224.14 | 370.85 | 29.97 |
| 17 | ಹಾಸನ | 25.02 | 1986.77 | 6362.06 | 665.56 | 14.52 | | 945.79 | 26.51 | 0.60 | 114.80 | 10.00 | 300.02 | | |
| 18 | ಹಾವೇರಿ | 29.76 | 2117.96 | 149.85 | 560.08 | 11.23 | | 584.89 | 19.20 | 0.60 | 75.00 | | 289.70 | | |
| 19 | ಕೊಡಗು | 104.43 | 23.78 | | 134.72 | 0.72 | | 87.46 | 65.32 | | 15.25 | | 5.00 | | 30.00 |
| 20 | ಕೋಲಾರ | | 2398.72 | 23.06 | 735.59 | 12.03 | | 317.02 | 20.46 | 0.60 | 96.35 | 3.50 | 714.08 | | |
| 21 | ಕೊಪ್ಪಳ | 7.99 | 2997.63 | | 958.56 | 12.79 | | 1367.65 | 70.80 | 0.60 | 38.21 | | 488.24 | 561.17 | 120.00 |
| 22 | ಮಂಡ್ಯ | 16.99 | 1439.11 | 412.19 | 273.73 | 5.58 | | 399.35 | 132.72 | 0.52 | 60.93 | 25.00 | 222.26 | | 159.94 |
| 23 | ಮೈಸೂರು | 103.74 | 1639.45 | 240.44 | 482.27 | 19.37 | | 629.83 | 56.14 | 33.30 | 80.33 | | 141.29 | | 202.45 |
| 24 | ರಾಯಚೂರು | 2.75 | 593.77 | | 350.89 | 11.54 | | 378.61 | 16.35 | 0.60 | 19.73 | | 74.16 | 9.49 | |
| 25 | ರಾಮನಗರ | | 1487.87 | 225.00 | 413.25 | 4.29 | | 336.37 | 62.70 | 0.60 | 62.68 | | 377.15 | | |
| 26 | ಶಿವಮೊಗ್ಗ | 81.22 | 895.79 | 132.28 | 675.81 | 9.87 | | 422.20 | 64.31 | 182.98 | 89.33 | 7.50 | 40.00 | | |
| 27 | ತುಮಕೂರು | | 1921.35 | 1822.94 | 563.81 | 11.31 | | 546.65 | 36.30 | 0.60 | 123.08 | | 267.51 | 50.07 | 100.00 |
| 28 | ಉಡುಪಿ | 4.70 | 74.46 | 61.74 | 176.56 | 1.70 | | 174.32 | 29.10 | | 24.46 | | 10.00 | | |
| 29 | ಉತ್ತರ ಕನ್ನಡ | 0.58 | 327.94 | 30.56 | 406.07 | 1.39 | | 319.54 | 72.90 | | 41.32 | | 20.00 | | 3.00 |
| 30 | ಯಾದಗಿರಿ | 9.63 | 492.84 | | 171.10 | 5.21 | | 282.29 | 11.45 | | 21.09 | | 29.68 | 78.05 | |
| 31 | ನಿರ್ದೇಶನಾಲಯ | 79.37 | 21.58 | | | | 200.00 | 464.87 | 30.74 | 268.22 | 19.59 | 263.98 | 2.97 | | 4.90 |
| 32 | ಕೇಂದ್ರ ಕಛೇರಿಯ ಅಧೀನ ಕಛೇರಿಗಳು | | | | 206.58 | | | 167.67 | 1.54 | | | | | | 432.28 |
| | ಒಟ್ಟು | 736.32 | 36438.57 | 14908.34 | 17591.30 | 275.70 | 1000.00 | 16152.10 | 1298.11 | 670.45 | 1643.79 | 399.98 | 7763.53 | 2848.81 | 3047.82 |

LAQ-1152

ಅನುಬಂಧ-2a

## 2018-19ನೇ ಸಾಲಿನಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಜಿಲ್ಲಾವಾರು ವೆಚ್ಚಮಾಡಲಾಗಿರುವ ವಿವರ (ರೂ.ಲಕ್ಷಗಳಲ್ಲಿ)

| ಕ್ರ. ಸಂ | ಜಿಲ್ಲೆಗಳು | ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ | S-20 ಕೀಟನಾಶಕ ಶೇಷ ವಿಶ್ಲೇಷಣೆ ಪ್ರಯೋಗಾಲಯ-ನಬಾರ್ಡ್ | Micro Irrigation, RIDF-XXI. (4401-00-800-1-08) | ಬಾಗಲಕೋಟೆಯಲ್ಲಿ ತೋಟಗಾರಿಕಾ ವಿಶ್ವ ವಿದ್ಯಾಲಯ | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ | ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ | ತೋಟಗಾರಿಕೆ ಕಟ್ಟಡಗಳು | ತೋಟಗಾರಿಕೆ ಕ್ಷೇತ್ರಗಳ ನಿರ್ವಹಣೆ | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ | ಪ್ರಚಾರ ಮತ್ತು ಸಾಹಿತ್ಯ | ಶೀಥಲ ಗೃಹಗಳಿಗೆ ಸಹಾಯಧನ ಯೋಜನೆ | ಜೇನು ಸಾಕಾಣಿಕೆ | ರೈತರಿಗೆ ಸಹಾಯ | ರೈತರಿಗೆ ತರಬೇತಿ | ಒಟ್ಟು |
|---|---|---|---|---|---|---|---|---|---|---|---|---|---|---|---|---|
| 1 | ಬೆಂಗಳೂರು (ನ) | 5.99 | | | | | 31.94 | 2.00 | 2.23 | 2.00 | 6.00 | 6.9490 | 11.09 | 7.00 | 1.50 | 4679.72 |
| 2 | ಬೆಂಗಳೂರು (ಗ್ರಾ) | 5.00 | | | | | 49.85 | | 4.96 | | | | 13.83 | 7.79 | 0.99 | 2795.51 |
| 3 | ಬಾಗಲಕೋಟೆ | 1.21 | | | 1151.00 | 5.00 | 69.42 | 10.00 | 4.64 | 1.000 | 1.90 | | | 10.93 | 0.93 | 3929.66 |
| 4 | ಬೆಳಗಾವಿ | 8.75 | 25.00 | 87.86 | | 2.00 | 54.98 | 35.00 | 14.99 | 4.000 | 2.98 | | 2.99 | 3.87 | 0.95 | 4200.63 |
| 5 | ಬಳ್ಳಾರಿ | 1.43 | | 49.95 | | 8.00 | 47.93 | 5.00 | 14.90 | 7.490 | 2.83 | 8.00 | | 6.28 | 1.30 | 2888.67 |
| 6 | ಬೀದರ್ | 3.00 | | | | | 23.76 | 17.50 | 2.49 | | | | | 5.48 | | 1493.03 |
| 7 | ವಿಜಯಪುರ | 0.65 | | 99.69 | | 1.00 | 20.00 | 30.00 | 3.00 | | 0.88 | | | 9.97 | 0.58 | 7072.16 |
| 8 | ಚಾಮರಾಜನಗರ | 2.04 | | | | 2.85 | 59.23 | 8.00 | 9.16 | 11.420 | 12.00 | | 7.38 | 6.39 | 2.79 | 4224.65 |
| 9 | ಚಿಕ್ಕಬಳ್ಳಾಪುರ | 4.77 | | | | | 9.52 | 20.00 | 4.80 | 2.990 | 3.35 | | 7.22 | 2.19 | 0.44 | 3696.84 |
| 10 | ಚಿಕ್ಕಮಗಳೂರು | 17.64 | | 49.98 | | 3.00 | 99.72 | 30.00 | 24.99 | 5.992 | 7.99 | | 14.49 | 14.99 | 2.00 | 4388.79 |
| 11 | ಚಿತ್ರದುರ್ಗ | 0.99 | | | | | 138.25 | 36.00 | 15.93 | 14.000 | 15.00 | | | 11.55 | 4.00 | 4776.28 |
| 12 | ದಕ್ಷಿಣಕನ್ನಡ | 18.90 | | | | 1.00 | 7.50 | 25.00 | 5.00 | 5.960 | 10.50 | | 18.46 | 13.98 | 2.92 | 760.73 |
| 13 | ದಾವಣಗೆರೆ | 1.08 | | | | 5.00 | 65.00 | 25.00 | 10.00 | 6.000 | 5.00 | | | 7.50 | 3.00 | 5664.79 |
| 14 | ಧಾರವಾಡ | 1.71 | | | | | 9.55 | 30.00 | 9.66 | 1.470 | 5.15 | 7.99 | 8.62 | 4.86 | 0.92 | 1600.99 |
| 15 | ಗದಗ | 0.74 | | | | 1.00 | 9.99 | 15.00 | 6.50 | 2.830 | 4.89 | | | 4.87 | 1.37 | 2194.58 |
| 16 | ಕಲಬುರಗಿ | 3.32 | | 79.94 | | | 27.69 | 20.00 | 9.99 | 0.290 | 5.98 | | 1.72 | 2.83 | 2.42 | 3641.37 |
| 17 | ಹಾಸನ | 7.50 | | | | 2.00 | 10.00 | 20.00 | 14.95 | 6.000 | 9.99 | 6.8659 | 5.06 | 6.92 | 1.84 | 10542.77 |
| 18 | ಹಾವೇರಿ | 2.00 | | | | 4.00 | 48.28 | 19.50 | 7.10 | 2.530 | 1.27 | 30.00 | | 4.00 | 1.00 | 3957.95 |
| 19 | ಕೊಡಗು | 22.43 | | | | 3.50 | 0.74 | 10.00 | 19.92 | 2.830 | 2.99 | | 44.58 | 9.73 | 3.85 | 587.25 |
| 20 | ಕೋಲಾರ | 6.98 | | | | | 29.36 | 25.00 | 1.74 | 2.000 | 6.50 | 0.50 | 2.29 | 2.97 | 0.59 | 4399.33 |
| 21 | ಕೊಪ್ಪಳ | 7.99 | | | | 2.00 | 85.00 | 20.00 | 10.00 | | 10.00 | | | 1.00 | 2.00 | 6761.62 |
| 22 | ಮಂಡ್ಯ | 9.98 | | | | 3.98 | 19.54 | 20.00 | 15.00 | 20.000 | 7.99 | | 13.55 | 14.74 | 1.93 | 3275.02 |
| 23 | ಮೈಸೂರು | 9.00 | | | | 3.88 | 40.00 | 40.00 | 6.00 | 19.770 | 21.71 | | 13.12 | 10.00 | 8.00 | 3800.07 |
| 24 | ರಾಯಚೂರು | 0.16 | | | | | 24.93 | 50.00 | 14.79 | 5.970 | 2.96 | | | 4.00 | 0.90 | 1561.59 |
| 25 | ರಾಮನಗರ | 2.98 | | | | | 10.00 | 11.00 | 20.00 | 5.970 | 6.00 | | 1.98 | 9.64 | 0.38 | 3037.86 |
| 26 | ಶಿವಮೊಗ್ಗ | 8.48 | 25.00 | 79.91 | | 5.99 | 54.79 | 30.00 | 10.00 | 7.460 | 4.00 | 2.43 | 18.28 | 24.17 | 1.39 | 2873.18 |
| 27 | ತುಮಕೂರು | 9.00 | | | | | 59.81 | 12.00 | 4.99 | 5.920 | 4.99 | | 7.00 | 7.18 | 1.57 | 5556.08 |
| 28 | ಉಡುಪಿ | 5.92 | | | | 3.60 | 2.00 | 7.50 | 8.99 | 4.900 | 4.95 | | 5.15 | 3.45 | 0.99 | 604.50 |
| 29 | ಉತ್ತರ ಕನ್ನಡ | 19.99 | | | | | 24.62 | 30.00 | 6.79 | 2.980 | 6.98 | | 14.17 | 6.76 | 2.94 | 1338.53 |
| 30 | ಯಾದಗಿರಿ | 0.49 | | | | 0.96 | 14.72 | 5.00 | | 1.970 | 2.99 | | | 2.91 | 0.97 | 1131.36 |
| 31 | ನಿರ್ದೇಶನಾಲಯ | 3.48 | | | | | | | | | | | | | | 1359.70 |
| 32 | ಕೇಂದ್ರ ಕಛೇರಿಯ ಅಧೀನ ಕಛೇರಿಗಳು | | | | | | | | | | | | | | | 808.07 |
| | ಒಟ್ಟು | 193.59 | 50.00 | 447.34 | 1151.00 | 58.76 | 1148.13 | 808.50 | 283.51 | 153.74 | 177.76 | 62.73 | 210.98 | 227.95 | 54.45 | 109603.28 |

ತೋಟಗಾರಿಕೆ ಜಂಟಿ ನಿರ್ದೇಶಕರು
(ಯೋಜನೆ)

ಅನುಬಂಧ-2b

LAQ - 1152

## 2019-20 ನೇ ಸಾಲಿನ ವಿವಿಧ ಯೋಜನೆಗಳಡಿಯಲ್ಲಿ ಜಿಲ್ಲಾವಾರು ವೆಚ್ಚ ಮಾಡಲಾಗಿರುವ ವಿವರ(ರೂ. ಲಕ್ಷಗಳಲ್ಲಿ)

| ಕ್ರ.ಸಂ | ಜಿಲ್ಲೆಗಳು | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ) | ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗೆ ತೆಂಗಿನಲ್ಲಿ ಸಂಯೋಜಿತ ಬೇಸಾಯ | ರಾಷ್ಟ್ರೀಯ ತೋಟಗಾರಿಕೆ ಮಿಷನ್ | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ | ತೋಟಗಾರಿಕೆ ನಿಗಮ ಮತ್ತು ಮಂಡಳಿಗಳಿಗೆ ಸಹಾಯಧನ | ಸಮಗ್ರ ತೋಟಗಾರಿಕಾ ಅಭಿವೃದ್ಧಿ | ಕೃಷಿ ಕ್ಷೇತ್ರ ಮತ್ತು ಸಸ್ಯವಾಟಿಕೆಗಳ ಅಭಿವೃದ್ಧಿ ಮತ್ತು ನಿರ್ವಹಣೆ | ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ | 2019-20 ನೇ ಸಾಲಿನ ವಿವಿಧ ಯೋಜನೆಗಳಡಿಯಲ್ಲಿ ಜಿಲ್ಲಾವಾರು ವೆಚ್ಚ ಮಾಡಲಾಗಿರುವ ವಿವರ(ರೂ. ಲಕ್ಷಗಳಲ್ಲಿ) | ತೋಟಗಾರಿಕೆ ಕಟ್ಟಡಗಳು, | ಕೃಷಿ ಭಾಗ್ಯ (ತೋಟಗಾರಿಕೆ) |
|---|---|---|---|---|---|---|---|---|---|---|---|---|---|
| 1 | ಬೆಂಗಳೂರು (ನ) | | 332.83 | | 380.51 | | | 119.83 | 19.07 | 0.60 | 52.46 | | 1360.89 |
| 2 | ಬೆಂಗಳೂರು (ಗ್ರಾ) | | 590.82 | | 708.19 | | | 262.61 | 19.88 | 0.60 | 17.96 | 10.00 | 1047.94 |
| 3 | ಕೋಲಾರ | | 1911.32 | 10.48 | 589.15 | | | 281.41 | 22.98 | 0.59 | 70.59 | | 550.99 |
| 4 | ತುಮಕೂರು | | 1768.25 | 434.66 | 552.71 | 5.88 | | 459.01 | 43.26 | 0.60 | 69.45 | 15.00 | 168.03 |
| 5 | ದಾವಣಗೆರೆ | 177.71 | 2175.61 | 50.28 | 756.20 | 22.99 | | 333.28 | 54.36 | 23.60 | 58.97 | | 91.24 |
| 6 | ಶಿವಮೊಗ್ಗ | 70.34 | 322.67 | 27.54 | 682.74 | 19.50 | | 438.73 | 9.85 | 202.51 | 108.73 | 1.50 | |
| 7 | ರಾಮನಗರ | | 1647.87 | 79.77 | 381.59 | 9.00 | | 318.80 | 57.84 | 0.60 | 43.74 | 10.00 | 155.42 |
| 8 | ಚಿಕ್ಕಬಳ್ಳಾಪುರ | | 1565.88 | | 774.35 | | | 372.35 | 32.50 | 4.60 | 39.98 | | 1016.55 |
| 9 | ಚಿತ್ರದುರ್ಗಾ | | 1802.93 | 193.28 | 650.61 | | | 368.41 | 15.69 | 0.60 | 65.75 | | 239.61 |
| 10 | ಬಾಗಲಕೋಟೆ | 75.07 | 774.55 | | 546.87 | 19.57 | | 439.10 | 8.48 | 0.59 | 15.99 | | 45.63 |
| 11 | ಬೆಳಗಾವಿ | 34.07 | 1119.75 | | 884.93 | | | 556.51 | 110.73 | 89.61 | 44.00 | | 182.10 |
| 12 | ಧಾರವಾಡ | | 273.27 | | 377.04 | 86.97 | | 1224.38 | 15.74 | 0.60 | 28.99 | | 128.42 |
| 13 | ಗದಗ | 1.29 | 603.92 | | 444.65 | | | 256.49 | 7.81 | 0.59 | 42.48 | | 8.01 |
| 14 | ಹಾವೇರಿ | 37.47 | 2223.74 | | 574.67 | 19.97 | | 236.94 | 9.39 | 0.60 | 10.14 | 60.00 | 222.97 |
| 15 | ಉತ್ತರ ಕನ್ನಡ | 0.20 | 150.50 | 27.00 | 521.59 | 29.45 | | 223.19 | 11.50 | 0.60 | 46.94 | 30.00 | 57.88 |
| 16 | ಬಿಜಾಪುರ | 126.08 | 1294.39 | | 1268.92 | 28.00 | | 258.71 | 12.55 | | 23.99 | 75.00 | |
| 17 | ಕಲಬುರ್ಗಿ | 11.07 | 1668.41 | | 682.82 | | | 360.08 | 33.50 | 0.60 | 21.97 | | 2.52 |
| 18 | ಕೊಪ್ಪಳ | 9.11 | 3501.20 | | 716.06 | 39.24 | | 913.38 | 143.03 | 0.60 | 14.79 | | 156.23 |
| 19 | ರಾಯಚೂರು | 0.20 | 613.13 | | 326.25 | | | 302.75 | 68.37 | 0.59 | 23.46 | | |
| 20 | ಯಾದಗಿರಿ | 31.45 | 744.94 | | 216.55 | | | 236.04 | 9.47 | 0.30 | 13.14 | 35.00 | 0.55 |
| 21 | ಬಳ್ಳಾರಿ | 34.92 | 1852.25 | | 1039.07 | 9.20 | | 276.20 | 25.27 | 0.60 | 36.50 | 6.00 | 68.77 |
| 22 | ಬೀದರ್ | 6.06 | 494.35 | | 280.82 | | | 181.24 | 96.17 | 60.90 | 18.97 | 30.00 | 15.10 |
| 23 | ಚಾಮರಾಜನಗರ | 16.05 | 695.39 | 21.86 | 414.78 | 7.50 | | 211.66 | 6.23 | 0.59 | 40.89 | 40.00 | 6.17 |
| 24 | ಚಿಕ್ಕಮಗಳೂರು | 6.09 | 929.81 | 132.87 | 794.54 | 11.91 | | 596.06 | 30.09 | 0.60 | 65.93 | 70.00 | 50.59 |
| 25 | ದ.ಕನ್ನಡ | 3.56 | 62.71 | 33.32 | 303.67 | | | 210.13 | 46.66 | 0.01 | 44.00 | 43.00 | |
| 26 | ಹಾಸನ | 25.81 | 2217.10 | 294.52 | 595.23 | | | 1418.51 | 28.17 | 0.60 | 57.32 | | 154.13 |
| 27 | ಕೊಡಗು | 93.24 | 10.66 | | 185.10 | | | 63.30 | 72.95 | | 17.63 | 10.00 | |
| 28 | ಮಂಡ್ಯ | 11.99 | 1209.69 | 136.80 | 431.01 | 11.00 | | 365.49 | 190.82 | 0.60 | 45.59 | 20.00 | 91.89 |
| 29 | ಮೈಸೂರು | 159.23 | 1046.07 | 79.03 | 485.04 | 7.00 | | 447.61 | 45.60 | 55.56 | 50.49 | 80.00 | 87.73 |
| 30 | ಉಡುಪಿ | 4.98 | 94.74 | 49.33 | 166.18 | | | 111.07 | 44.76 | | 10.92 | | |
| 31 | ನಿರ್ದೇಶನಾಲಯ | 78.14 | 14.98 | 3.18 | 248.97 | | | 180.47 | 4.15 | 240.06 | 26.04 | 431.00 | 1.98 |
| 32 | ಕೇಂದ್ರ ಕಛೇರಿಯ ಅಧೀನ ಕಛೇರಿಗಳು | | | | | | 1000.00 | 766.89 | 1.50 | | | 33.50 | |
| | ಒಟ್ಟು | 1014.12 | 33713.73 | 1573.92 | 16980.79 | 327.19 | 1000.00 | 12790.64 | 1298.37 | 688.49 | 1227.78 | 1000.00 | 5911.34 |

(7)

LAQ - 1152

ಅನುಬಂಧ-2b

# 2019-20 ನೇ ಸಾಲಿನ ವಿವಿಧ ಯೋಜನೆಗಳಡಿಯಲ್ಲಿ ಜಿಲ್ಲಾವಾರು ವೆಚ್ಚ ಮಾಡಲಾಗಿರುವ ವಿವರ(ರೂ. ಲಕ್ಷಗಳಲ್ಲಿ)

| ಕ್ರ.ಸಂ | ಜಿಲ್ಲೆಗಳು | ಕರ್ನಾಟಕ ಜಲಾನಯನ ಅಭಿವೃದ್ಧಿ ಯೋಜನೆ -II (ಸುಜಲಾ-III) - ಇಎಪಿ | ತೋಟಗಾರಿಕೆ ಉದ್ಯಾನವನಗಳು ಮತ್ತು ತೋಟಗಳು | ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ | Micro Irrigation, RIDF-XXI | ಬಾಗಲಕೋಟೆಯಲ್ಲಿ ತೋಟಗಾರಿಕಾ ವಿಶ್ವ ವಿದ್ಯಾಲಯ | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ (ಜಿಲ್ಲಾವಲಯ) | ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ | ತೋಟಗಾರಿಕೆ ಕಟ್ಟಡಗಳು | ತೋಟಗಾರಿಕೆ ಕ್ಷೇತ್ರಗಳ ನಿರ್ವಹಣೆ | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ | ಪ್ರಚಾರ ಮತ್ತು ಸಾಹಿತ್ಯ | ಶೀಥಲ ಗೃಹಗಳಿಗೆ ಸಹಾಯಧನ ಯೋಜನೆ, | ಜೇನು ಸಾಕಾಣಿಕೆ | ರೈತರಿಗೆ ಸಹಾಯ | ರೈತರಿಗೆ ತರಬೇತಿ | ಒಟ್ಟು |
|---|---|---|---|---|---|---|---|---|---|---|---|---|---|---|---|---|---|
| 1 | ಬೆಂಗಳೂರು (ನ) | | 788.81 | 23.78 | | | | 31.10 | 15.00 | 3.00 | 1.63 | 8.00 | 6.98 | 20.56 | 9.00 | 2.00 | 3176.04 |
| 2 | ಬೆಂಗಳೂರು (ಗ್ರಾ) | 260.49 | 104.68 | 29.27 | | | | 54.47 | 12.00 | 10.00 | | | | 10.46 | 7.00 | 1.39 | 3147.74 |
| 3 | ಕೋಲಾರ | | | 19.85 | | | | 37.44 | 24.00 | 1.75 | 2.00 | 7.98 | 2.00 | 2.45 | 2.07 | 0.62 | 3537.68 |
| 4 | ತುಮಕೂರು | 1.60 | 111.99 | 26.36 | | | | 56.30 | 13.85 | 5.00 | 6.00 | 10.00 | | 5.39 | 7.20 | 1.80 | 3762.33 |
| 5 | ದಾವಣಗೆರೆ | 189.38 | 34.00 | 4.87 | | | 4.15 | 58.71 | 30.00 | 8.98 | 4.73 | 7.84 | | | 7.51 | 2.50 | 4096.92 |
| 6 | ಶಿವಮೊಗ್ಗ | | | 44.68 | | | 7.50 | 59.84 | 30.00 | 14.97 | 8.89 | 5.00 | 1.17 | 24.72 | 30.94 | 2.48 | 2114.31 |
| 7 | ರಾಮನಗರ | | | 14.84 | 25.00 | | | 10.00 | 10.52 | 20.00 | 5.99 | 10.00 | | 1.99 | 11.00 | 0.26 | 2814.24 |
| 8 | ಚಿಕ್ಕಬಳ್ಳಾಪುರ | | 84.89 | 22.38 | | | | 9.95 | 25.00 | 4.99 | 2.92 | 5.00 | | 13.30 | 2.71 | 0.75 | 3978.08 |
| 9 | ಚಿತ್ರದುರ್ಗಾ | | | 6.45 | 24.96 | | | 59.45 | | 19.98 | 13.97 | 16.00 | | | 11.91 | 4.00 | 3493.58 |
| 10 | ಬಾಗಲಕೋಟೆ | | 0.95 | 8.10 | | 165.99 | 2.10 | 89.03 | 8.00 | 1.39 | 2.45 | 1.95 | | | 10.79 | 0.28 | 2216.88 |
| 11 | ಬೆಳಗಾವಿ | | 9.99 | 15.13 | | | 1.00 | 60.00 | 34.98 | 19.99 | 3.00 | 3.00 | | 3.00 | 4.00 | 1.00 | 3176.78 |
| 12 | ಧಾರವಾಡ | 63.02 | 0.99 | 4.15 | 23.50 | | | 14.96 | 38.00 | 9.67 | 1.70 | 5.49 | 8.00 | 12.92 | 5.83 | 0.54 | 2324.17 |
| 13 | ಗದಗ | | 19.99 | 52.54 | | | 1.00 | 9.51 | 25.00 | 4.96 | 2.99 | 11.91 | | | 4.09 | 2.00 | 1499.22 |
| 14 | ಹಾವೇರಿ | 28.71 | 0.96 | 8.66 | | | 3.08 | 49.82 | 28.00 | 6.52 | 2.21 | 1.00 | 30.00 | | 4.00 | 1.00 | 3559.86 |
| 15 | ಉತ್ತರ ಕನ್ನಡ | | | 8.26 | | | | 24.99 | 24.00 | 7.00 | 2.99 | 7.00 | | 13.36 | 4.55 | 2.60 | 1193.60 |
| 16 | ಬಿಜಾಪುರ | | 2.99 | 87.44 | | | 1.00 | 19.64 | 15.00 | 3.00 | 3.00 | 1.00 | | | 3.50 | 0.80 | 3225.01 |
| 17 | ಕಲಬುರ್ಗಿ | 185.15 | 19.97 | 4.27 | | | | 29.74 | 28.16 | 11.98 | 1.00 | 8.00 | | 1.97 | 6.98 | 2.59 | 3080.77 |
| 18 | ಕೊಪ್ಪಳ | 204.90 | 54.99 | 24.47 | 52.95 | | 1.99 | 99.96 | 22.53 | 9.26 | | 13.00 | | | 1.00 | 2.00 | 5980.68 |
| 19 | ರಾಯಚೂರು | 3.19 | | 2.77 | 24.24 | | | 24.39 | 15.00 | 14.55 | 5.98 | 3.00 | | | 3.75 | 0.80 | 1432.42 |
| 20 | ಯಾದಗಿರಿ | 28.73 | | 1.59 | | | | 21.52 | 10.00 | | 2.00 | 3.00 | | | 2.98 | 1.00 | 1358.26 |
| 21 | ಬಳ್ಳಾರಿ | | | 9.31 | | | 8.00 | 53.54 | | 14.96 | 6.38 | 3.15 | 7.99 | | 8.24 | 2.00 | 3462.35 |
| 22 | ಬೀದರ್ | 48.10 | 0.99 | 8.00 | | | | 25.14 | 20.00 | 2.50 | 2.00 | | | | 5.58 | | 1295.92 |
| 23 | ಚಾಮರಾಜನಗರ | 238.31 | | 5.77 | | | 3.00 | 59.66 | 10.00 | 10.00 | 3.71 | 13.99 | | 6.31 | 7.00 | 4.00 | 1822.87 |
| 24 | ಚಿಕ್ಕಮಗಳೂರು | 6.16 | 184.99 | 55.62 | | | 3.00 | 44.96 | 30.00 | 24.97 | 6.00 | 7.99 | | 8.15 | 14.20 | 1.90 | 3076.45 |
| 25 | ದ.ಕನ್ನಡ | | 20.00 | 76.76 | | | 1.00 | 5.50 | 40.00 | 5.00 | 6.50 | 10.49 | | 21.21 | 13.99 | 3.00 | 950.51 |
| 26 | ಹಾಸನ | | | 24.57 | | | 2.00 | 10.00 | | 19.95 | 5.21 | 11.90 | 6.11 | 4.34 | 7.00 | 2.00 | 4884.48 |
| 27 | ಕೊಡಗು | | 13.99 | 44.36 | | | 3.50 | 1.00 | 15.00 | 14.31 | 2.90 | 2.76 | | 42.49 | 11.99 | 2.49 | 607.67 |
| 28 | ಮಂಡ್ಯ | | 189.99 | 16.96 | | | 4.00 | 18.19 | 25.00 | 17.95 | 29.94 | 9.44 | | 10.04 | 17.22 | 2.55 | 2856.16 |
| 29 | ಮೈಸೂರು | | 194.81 | 17.16 | | | 4.00 | 38.07 | 44.00 | 6.00 | 20.00 | 24.24 | | 7.17 | 9.70 | 8.00 | 2916.51 |
| 30 | ಉಡುಪಿ | | | 13.13 | | | 3.60 | 2.00 | 8.53 | 9.96 | 2.99 | 6.97 | | 6.74 | 3.38 | 0.80 | 540.08 |
| 31 | ನಿರ್ದೇಶನಾಲಯ | | 8.67 | 9.73 | | | | | | | | | | | | | 1247.36 |
| 32 | ಕೇಂದ್ರ ಕಛೇರಿಯ ಅಧೀನ ಕಛೇರಿಗಳು | | 275.00 | | | | | | | | | | | | | | 2076.89 |
| | ಒಟ್ಟು | 1257.74 | 2123.64 | 691.24 | 150.65 | 165.99 | 53.92 | 1078.88 | 601.57 | 302.60 | 159.07 | 219.10 | 62.26 | 216.55 | 239.12 | 57.14 | 84905.83 |

ತೋಟಗಾರಿಕೆ ಜಂಟಿ ನಿರ್ದೇಶಕರು
(ಯೋಜನೆ)

**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 24 ಎಲ್ಎಕ್ಯೂ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ 04/02/2021.

**ಇವರಿಂದ:**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.
4ನೇ ಮಹಡಿ, ವಿಕಾಸಸೌಧ,
ಬೆಂಗಳೂರು.

57
4/5
5/2/21

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಖಾದರ್ ಯು.ಟಿ ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1150ಕ್ಕೆ ಉತ್ತರಿಸುವ ಕುರಿತು

~**********~

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಖಾದರ್ ಯು.ಟಿ ಇವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1150ರ ಉತ್ತರದ 25 ಪ್ರತಿಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಇದರೊಂದಿಗೆ ಲಗತ್ತಿಸಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

**(ಬಸವರಾಜು ಹೆಚ್.ಎಂ)**
ಶಾಖಾಧಿಕಾರಿ,
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1150 |
| ಸದಸ್ಯರ ಹೆಸರು | : | ಶ್ರೀ ಖಾದರ್ ಯು.ಟಿ<br>(ಮಂಗಳೂರು) |
| ಉತ್ತರಿಸುವ ದಿನಾಂಕ | : | 05/02/2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿರುವ ಪಟ್ಟಣ ಪಂಚಾಯಿತಿ, ಪುರಸಭೆ ಮತ್ತು ನಗರಸಭೆಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರಗಳನ್ನು ಒದಗಿಸುವುದು) | ರಾಜ್ಯದಲ್ಲಿ ಪ್ರಸ್ತುತ 104 ಪಟ್ಟಣ ಪಂಚಾಯಿತಿಗಳು, 117 ಪುರಸಭೆಗಳು ಮತ್ತು 59 ನಗರಸಭೆಗಳು ಇರುತ್ತದೆ. ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ. | ಪಟ್ಟಣ ಪಂಚಾಯಿತಿಯಿಂದ ಪುರಸಭೆಗೆ, ಪುರಸಭೆಯಿಂದ ನಗರಸಭೆಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೇಯೇ; | ಹೌದು. |
| ಇ. | ಹಾಗಿದ್ದಲ್ಲಿ, ಮೇಲ್ದರ್ಜೆಗೇರಿಸಲು ಅನುಸರಿಸಲಾಗುತ್ತಿರುವ ಮಾನದಂಡ ಗಳೇನು; ಮೇಲ್ದರ್ಜೆಗೇರಿಸಲಾಗುವ ಸ್ಥಳೀಯ ಸಂಸ್ಥೆಗಳು ಯಾವುವು? (ವಿವರಗಳನ್ನು ಒದಗಿಸುವುದು). | ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ನಿಯಮ 3(1), 3(2) ಮತ್ತು 9 ಗಳನ್ವಯ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುವುದು.<br><br><u>ಪಟ್ಟಣ ಪಂಚಾಯಿತಿಯಿಂದ ಪುರಸಭೆ:</u><br><br>1. ಆ ಪಟ್ಟಣ ಪಂಚಾಯಿತಿಯ ಪ್ರದೇಶದ ಜನಸಂಖ್ಯೆ 20,000ಕ್ಕೆ ಕಡಿಮೆ ಇಲ್ಲದಂತೆ ಹಾಗೂ 50,000ಕ್ಕೆ ಹೆಚ್ಚಿಲ್ಲದಂತಿರಬೇಕು.<br>2. ಅಂತಹ ಪ್ರದೇಶದ ಜನಸಂಖ್ಯೆಯ ಜನಸಾಂದ್ರತೆಯು ಆ ಪ್ರದೇಶದ ಒಂದು ಚದುರ ಕಿ.ಮೀ. ವಿಸ್ತೀರ್ಣಕ್ಕೆ 1500ಕ್ಕಿಂತ ಕಡಿಮೆ ಇಲ್ಲದಿರುವುದು.<br>3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂತಹ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಬತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬರಿಗೆ 45 ರೂಪಾಯಿಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆ ಇರದ ಹೊರತು.<br>4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗಾವಕಾಶಗಳ ಶೇಕಡಾವಾರು ಪ್ರಮಾಣವು ಒಟ್ಟು ಉದ್ಯೋಗದ ಪ್ರಮಾಣಕ್ಕಿಂತ ಶೇ.50ಕ್ಕಿಂತ ಕಡಿಮೆ ಇಲ್ಲದಿರುವುದು. |

..2

